

ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine



Vol-14 February - 2017 Issue No. 02 ₹ 10/-





Vajubhai Vala, Hon'ble Governor of Karnataka, Patron, Bharat Scouts and Guides, Karnataka sented the Rajyapuraskar Certificates to Scouts-Guides, Rovers-Rangers & Chathurtha Charan tificates to Cubs and Heerak Pankh Certificates to BulBuls on 3rd February 2017 at Glass House, bhavan, Bengaluru. Sri Tanveer Sait, Hon'ble Minister for Wakf, Primary & Secondary cation Govt. of Karnataka and Vice-President, BS&G, Karnataka, Sri P.G.R. Sindhia, State Chief nmissioner are seen.



v of the Scouts-Guides, Scouters-Guiders, Parents, Wellwishers and Invitees on the occasion of Rajyapuraskar Rally held at Rajbhavan, Benguluru.



ಜನವರಿ 26, 2017ರಂದು ಕಾರವಾರ ಜಿಲ್ಲಾಡಳಿತ ಆಶ್ರಯದಲ್ಲಿ ಜರುಗಿದ 68ನೇ ಗಣರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಶ್ರೀ ಆರ್.ವಿ. ದೇಶಪಾಂಡೆ, ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಸಚಿವರು ರೋವರ್ಸ್-ರೇಂಜರ್ಸ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು



ಜನವರಿ 26, 2017ರಂದು ಬಳ್ಳಾರಿ ಜಿಲ್ಲಾಡಳಿತ ಆಶ್ರಯದಲ್ಲಿ ಜರುಗಿದ 68ನೇ ಗಣರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಶ್ರೀ ಸಂತೋಷ್ ಲಾಡ್, ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರು ಸ್ಕೌಟ್ಸ್-ಗೈಡ್ಸ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು



ಫೆಬ್ರವರಿ 04, 2017ರಂದು ಮಂಗಳೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಜಾನಪದ ವಿದ್ವಾಂಸ ಹಾಗೂ ವಿಶ್ರಾಂತ ಕುಲಪತಿ, ಡಾ|| ಬಿ.ಎ. ವಿವೇಕ್ ರೈ ದೀಪಬೆಳಗಿಸಿ ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಪಿ.ಜಿ.ಆರ್ ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಶ್ರೀನಿವಾಸ್ ದೇಶಪಾಂಡೆ, ಪಿ.ಆರ್.ಓ., ಕರ್ನಾಟಕ ಬ್ಯಾಂಕ್, ಶ್ರೀ ಎನ್.ಜಿ. ಮೋಹನ್, ಡಿ.ಸಿ.ಸಿ. ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



ಜನವರಿ 26, 2017ರಂದು ತುಮಕೂರು ಮಹಾತ್ಮಗಾಂಧಿ ಕ್ರೀಡಾಂಗಣದಲ್ಲಿ ಜರುಗಿದ 68ನೇ ಗಣರಾಜ್ಯೋತ್ಸವ ಸಮಾರಂಭದಲ್ಲಿ ಶ್ರೀ ಟಿ.ಬಿ. ಜಯಚಂದ್ರ, ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಗೈಡ್ಸ್‌ಗಳಿಗೆ ರಾಷ್ಟ್ರಪತಿ ಪುರಸ್ಕಾರ ಪ್ರಶಸ್ತಿಗಳನ್ನು ವಿತರಿಸಿದರು. ಚಿತ್ರದಲ್ಲಿ ಮಾನ್ಯ ಶಾಸಕರು, ಸಂಸದರು, ಜಿಲ್ಲಾಧಿಕಾರಿಗಳು, ಸಾ.ಶಿ. ಇಲಾಖೆಯ ಉಪನಿರ್ದೇಶಕರು ಜಿಲ್ಲಾ ಪದಾಧಿಕಾರಿಗಳು ಹಾಗೂ ಇತರರನ್ನು ಕಾಣಬಹುದು



ಇತ್ತೀಚೆಗೆ ಹಾವೇರಿ ಜಿಲ್ಲಾ ಸಂಸ್ಥೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ಏರ್ಪಡಿಸಿದ್ದ ಕರ್ನಾಟಕ ದರ್ಶನಕ್ಕೆ ಜಿಲ್ಲಾ ಪದಾಧಿಕಾರಿಗಳು ಹಸಿರು ನಿಶಾನೆ ತೋರಿಸಿ ಚಾಲನೆ ನೀಡುತ್ತಿರವುದು.



ಫೆಬ್ರವರಿ 11 ರಿಂದ 17ರ ವರೆಗೆ ಚಿತ್ರದುರ್ಗ ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ ಜಿಲ್ಲಾ ಮಟ್ಟದ ಕಬ್ ಮಾಸ್ಟರ್, ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್‌ಗಳ ಮೂಲ ತರಬೇತಿ ಶಿಬಿರವನ್ನು ಹೊಸದುರ್ಗ ತಾಲ್ಲೂಕು ಸಾಣೆಹಳ್ಳಿ ಮಠದಲ್ಲಿ ನೆಡೆಸಲಾಯಿತು. ಈ ಸಂದರ್ಭದಲ್ಲಿ ಪೂಜ್ಯ ಡಾ. ಪಂಡಿತಾರಾಧ್ಯ ಸ್ವಾಮೀಜಿಯವರನ್ನು ಸನ್ಮಾನಿಸಿ ಆರ್ಶಿವಾದ ಪಡೆಯಲಾಯಿತು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್
ಮಾಸಿಕ ವಾರ್ತಾಪತ್ರಿಕೆ

# Karnataka Scout & Guide
*Monthly News Magazine*




## ಪರಿವಿಡಿ




ಸಂಚಿಕೆಯ ವಾರ್ಷಿಕ ಚಂದಾ ರೂ. 100 / -
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100 / - ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017, 2226 7470
ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
www.kondajjibasappa.org
www.kondajjibasappa.com

ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scouts-Guides Karnataka




# ರಾಜ್ಯ ಮುಖ್ಯ ಆಯುಕ್ತರ ನುಡಿ



ಪ್ರಿಯ ಓದುಗ ಬಂಧುಗಳೇ
ಸಸ್ನೇಹ ನಮಸ್ಕಾರಗಳು

ಐತಿಹಾಸಿಕ ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಯ ಅನುಭವದ ಸವಿಯಲ್ಲಿ ನಾವಿನ್ನೂ ಇದ್ದೇವೆ. ಹಿಂದೆ ನಡೆದ ಎಲ್ಲಾ ರಾಷ್ಟ್ರೀಯ ಜಾಂಬೂರಿಗಳಿಂತ ಹೆಚ್ಚು ಸ್ಕೌಟ್ಸ್ / ಗೈಡ್ಸ್ ಈ ಜಾಂಬೂರಿಯಲ್ಲಿ ಭಾಗವಹಿಸಿದ್ದರು. ವ್ಯವಸ್ಥೆಯು ಅದ್ಭುತವಾಗಿತ್ತೆಂಬುದು ಸಾರ್ವತ್ರಿಕ ಅಭಿಪ್ರಾಯವಾಗಿದೆ. ಜಾಂಬೂರಿಯು ಸೃಷ್ಟಿಸಿದ ಕ್ರಿಯಾಶೀಲತೆಯು ಬಹಳ ಮುಖ್ಯ. ನಮ್ಮ ತೀವ್ರ ಅಭಿಲಾಷೆಯಿಂದಾಗಿ ಮೈಸೂರಿನಲ್ಲಿ ಜಾಂಬೂರಿಯ ಆಯೋಜನೆಯಾಯಿತು. ಈ ಅಭಿಲಾಷೆ ಮತ್ತು ಆಸಕ್ತಿ ನಮ್ಮ ಕ್ರಿಯಾಶೀಲತೆಗೆ ಕಾರಣ.

ನೆನಪುಗಳ ಸವಿಯಲ್ಲಿ ಸಮಯವನ್ನು ಸವೆಸುವುದು ಸರಿಯಾಗಲಾರದು. ನೆನಪುಗಳ ಬೆಳಕಲ್ಲಿ ಮುಂದಿನ ಹೆಜ್ಜೆಗಳನ್ನು ಇಟ್ಟು ಹೆಚ್ಚಿನ ಸಾಧನೆಗಳನ್ನು ಮಾಡಬೇಕು. ಕರ್ತವ್ಯ ಮತ್ತು ಗುರಿ ಪ್ರತಿಯೊಬ್ಬ ಸ್ಕೌಟ್ಸ್ / ಗೈಡ್ಸ್‌ಗಳ ನಿತ್ಯ ಮಂತ್ರವಾಗಬೇಕು.

ವಾರ್ಷಿಕ ಪರೀಕ್ಷೆಗಳು ಹತ್ತಿರ ಬರುತ್ತಿವೆ. ಪರೀಕ್ಷೆಗಳಲ್ಲಿ ನೀವೆಲ್ಲರೂ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ ನಿಮ್ಮ ಮುಂದಿನ ಭವಿಷ್ಯವನ್ನು ರೂಪಿಸಿಕೊಳ್ಳಬೇಕು. ನಿಮ್ಮ ಏಳಿಗೆಗಾಗಿ ಶ್ರಮಿಸುವ ನಿಮ್ಮ ತಂದೆ-ತಾಯಿಗಳು ಮತ್ತು ಗುರು-ಹಿರಿಯರ ಮಾತುಗಳನ್ನು ಕಿವಿಕೊಟ್ಟು ಕೇಳಿ, ಅದರಂತೆ ನಡೆಯಿರಿ. ವಿನಾಕಾರಣ ಕಾಲಹರಣ ಮಾಡದೆ, ಇತರ ಚಟುವಟಿಕೆಗಳನ್ನೂ ಸದ್ಯಕ್ಕೆ ಕಡಿಮೆ ಮಾಡಿ, ಅಭ್ಯಾಸದ ಬಗ್ಗೆ ಮನಸ್ಸನ್ನು ನೀಡಿರಿ. ಪಾಠ-ಪ್ರವಚನಗಳ ಬಗ್ಗೆ ಯಾವುದೇ ರೀತಿಯ ಸಂಶಯವಿದ್ದರೆ ಸಂಕೋಚವಿಲ್ಲದೆ ನಿಮ್ಮ ಶಿಕ್ಷಕರೊಂದಿಗೆ ಮಾತನಾಡಿ ಪರಿಹರಿಸಿಕೊಳ್ಳಿ. **"Practice Makes Perfect"**ಎಂಬಂತೆ ಪುನ:-ಪುನ: ಮನನ ಮಾಡಿಕೊಳ್ಳಿ. ನಿಮ್ಮ ಯಶಸ್ಸು ನಿಮಗೆ ಮಾತ್ರವಲ್ಲ, ನಿಮ್ಮ ಪೋಷಕರಿಗೆ, ನಿಮ್ಮ ಶಾಲೆಗೆ, ಸ್ಕೌಟ್ಸ್ - ಗೈಡ್ಸ್ ಸಂಸ್ಥೆಗೆ ಗೌರವವನ್ನು ತರುತ್ತದೆ ಎಂಬುದನ್ನು ಮರೆಯಬೇಡಿ. ಮತ್ತೊಮ್ಮೆ ನಿಮಗೆಲ್ಲರಿಗೂ ಪರೀಕ್ಷೆಯಲ್ಲಿ ಯಶಸ್ಸುದೊರೆಯಲಿ ಎಂದು ಹಾರ್ಧಿಕವಾಗಿ ಆಶಿಸುತ್ತೇನೆ.



ಫೆಬ್ರವರಿ ತಿಂಗಳು ಸ್ಕೌಟ್ಸ್ ಗೈಡ್ಸ್ ಚಳವಳಿಯಲ್ಲಿ ಮಹತ್ವದ ಸಮಯ. ನಮ್ಮ ಚಳವಳಿಯ ಸಂಸ್ಥಾಪಕರಾದ ಶ್ರೀ ಬೇಡೆನ್ ಪೊವೆಲ್ ಅವರು ಮತ್ತು ಅಲೇವ್ ಲೇಡಿ ಬೇಡೆನ್ ಪೊವೆಲ್‌ರವರ ಹುಟ್ಟಿದ ಹಬ್ಬವು ಈ ತಿಂಗಳ 22 ರಂದು. ಶ್ರೀ ಬೇಡೆನ್ ಪೊವೆಲ್‌ರವರು 22-02-1857ರಲ್ಲಿ ಜನಿಸಿದರು, ಶ್ರೀಮತಿ ಒಲೇವ್ ಬೇಡೆನ್ ಪೊವೆಲ್‌ರವರು 22-02-1889ರಲ್ಲಿ ಜನಿಸಿದರು. ಇದೊಂದು ಅಪರೂಪದ ಸಂಗತಿ. ಸ್ಥಾಪಕರ ದಿನವನ್ನು "ವಿಶ್ವ ಚಿಂತನಾ ಮತ್ತು ಭ್ರಾತೃತ್ವ ದಿನ"ವೆಂದು ಆಚರಿಸಲಾಗುತ್ತಿದೆ. ಸ್ಕೌಟ್ಸ್ ಗೈಡ್ಸ್ ಸಂಸ್ಥೆಯ ಬೆಳವಣಿಗೆಗೆ ಸಹಕಾರಿಯಾಗುವ ವಿಷಯವೊಂದನ್ನು ವಿಶ್ವ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆ ಸೂಚಿಸುತ್ತದೆ. ಆ ವಿಷಯದ ಬಗ್ಗೆ ಆಲೋಚನೆ ಮತ್ತು ಕಾರ್ಯಾಚರಣೆಗಳ ಮೂಲಕ ಸಂಸ್ಥೆಯನ್ನು ನಾವು ಬೆಳೆಸಬೇಕು. ಈ ಬಾರಿಯ ವಿಷಯವು "ಬೆಳವಣಿಗೆ"(Growth) ಎಂಬುದಾಗಿದೆ.

ವಿಶ್ವ ಚಿಂತನಾ ಮತ್ತು ಭ್ರಾತೃತ್ವ ದಿನಾಚರಣೆಯನ್ನು ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳು, ಸ್ಥಳಿಯ ಸಂಸ್ಥೆಗಳು ಹಾಗೂ ಶಾಲೆಗಳು ಆಚರಿಸಿ, ಸ್ಕೌಟ್ಸ್-ಗೈಡ್ಸ್‌ಗಳು, ರೋವರ್ಸ್-ರೇಂಜರ್ಸ್‌ಗಳು ಹಾಗೂ ಸ್ಕೌಟ್ ಚಳುವಳಿಯಲ್ಲಿ ತೊಡಗಿರುವ ಎಲ್ಲಾ ಮಹನೀಯರು ವಿವಿಧ ಹಂತಗಳ ಸೇವೆಗಳಲ್ಲಿ ತೊಡಗಿರುವುದು ನನ್ನ ಗಮನಕ್ಕೆ ಬಂದಿದೆ. ಇದು ಸಂತೋಷದಾಯಕವಾಗಿದೆ.

ನಾನು ಹಲವಾರುಬಾರಿ ಯೋಚಿಸಿದ್ದೇನೆ. ಸ್ಕೌಟ್ ಮತ್ತು ಗೈಡ್ ಚಳವಳಿ ಎಂದರೇನು ?. ಈ ಚಳವಳಿಯಲ್ಲಿ ಭಾಗವಹಿಸುವುದರಿಂದ ವೈಯಕ್ತಿಕವಾಗಿ ಮತ್ತು ಸಾಮಾಜಿಕವಾಗಿ ಎಂಥ ಪರಿಣಾಮಗಳು ಉಂಟಾಗುತ್ತವೆ ?. ಸ್ಕೌಟ್ ಸಮವಸ್ತ್ರ ಧರಿಸುವುದು, ಹಲವಾರು ತರಬೇತಿ ಶಿಬಿರಗಳಲ್ಲಿ, ಜಾಂಬೂರಿಗಳಲ್ಲಿ ಭಾಗವಹಿಸುವುದು, ಮೊದಲಾದ ಕ್ರಿಯೆಗಳು ಸ್ಕೌಟಿಂಗ್‌ನ ಅಂತ:ಸತ್ವವೆ?. ತರಬೇತಿಗಳ ಮೂಲಕ ಪಡೆಯುವ ವಿವಿಧ ಪದಕಗಳು, ಪುರಸ್ಕಾರಗಳು, ಸ್ಕೌಟಿಂಗ್‌ನ ಸಾರ್ಥಕತೆಯನ್ನು ಬಿಂಬಿಸುತ್ತವೆಯೇ?. **"Once a Scout is always a Scout"**ಎಂಬ ಜನಪ್ರಿಯ ಧ್ಯೇಯ ವಾಕ್ಯ ನಮ್ಮ ವ್ಯಕ್ತಿತ್ವದಲ್ಲಿ ಅಡಕವಾಗಿದೆಯೇ ?. ಸರ್ಕಾರ ಮತ್ತು ಸಮಾಜವು ಸ್ಕೌಟ್ಸ್ / ಗೈಡ್ಸ್ ಚಳವಳಿಗೆ ನೀಡುತ್ತಿರುವ ಪ್ರೋತ್ಸಾಹವು ಎಷ್ಟರಮಟ್ಟಿಗೆ ಸಾರ್ಥಕತೆಯನ್ನು ಪಡೆಯುತ್ತಿದೆ ?. ಮುಂತಾದ ಹಲವಾರು ಪ್ರಶ್ನೆಗಳು ನನ್ನನ್ನು ಕಾಡಿದೆ.

ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಶತಮಾನಕ್ಕೂ ಮೀರಿದ ಇತಿಹಾಸವಿದೆ. ಪ್ರಪಂಚದ 200ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಚಳವಳಿಯು ಪಸರಿಸಿದೆ. ಬಹುಷ: ಲಕ್ಷಾಂತರ ಮಕ್ಕಳು / ಹಿರಿಯರು ಸ್ಕೌಟಿಂಗ್‌ನ ತರಬೇತಿಯನ್ನು ಪಡೆದಿದ್ದಾರೆ. ಕಣ್ಣಿಗೆ ಕಾಣುವಂತೆ ಸ್ಕೌಟ್ಸ್ / ಗೈಡ್ಸ್‌ಗಳು ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದಾರೆ. ಆದರೆ, ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ನಾವು ಇನ್ನೂ ಹೆಚ್ಚಾಗಿ ಸಾರ್ವಜನಿಕರಿಗೆ ಕಾಣುವಂತೆ ಸಾಮಾಜಿಕ ಕ್ರಿಯೆಗಳಲ್ಲಿ ಭಾಗವಹಿಸುವ ಅಗತ್ಯವಿದೆ.



ಇದೆಲ್ಲದಕ್ಕಿಂತ ಹೆಚ್ಚಾಗಿ ಸ್ಕೌಟ್ಸ್ / ಗೈಡ್ಸ್ ತರಬೇತಿಯು ವ್ಯಕ್ತಿತ್ವ ನಿರ್ಮಾಣದ ಚಳವಳಿಯಾಗಿದೆ. ಸ್ಕೌಟ್ಸ್- ಗೈಡ್ಸ್ ಪ್ರತಿಜ್ಞಾವಿಧಿಯನ್ನು ನಮ್ಮ ಆತ್ಮಗೌರವದ ಸಾಕ್ಷಿಯಾಗಿ ಮಾಡಲಾಗುತ್ತದೆ. ದೇಶ ಮತ್ತು ಧರ್ಮದೆಡೆಗೆ ನಮ್ಮ ಕರ್ತವ್ಯವನ್ನು ನಿರ್ವಹಿಸುತ್ತಾ, ಇತರರಿಗೆ ಸಹಾಯ ಮಾಡುತ್ತಾ, ಸ್ಕೌಟ್ ನಿಯಮವನ್ನು ಪಾಲಿಸುತ್ತೇನೆ ಎಂಬುದು ಪ್ರತಿಜ್ಞಾವಿಧಿಯಾಗಿದೆ. ಮುಖ್ಯವಾಗಿ ನಾವು ಗಮನಿಸಬೇಕಾದ್ದು, ಈ ಪ್ರತಿಜ್ಞಾವಿಧಿಗೆ ನಮ್ಮ ಆತ್ಮಗೌರವವೇ ಸಾಕ್ಷಿಯಾಗಿದೆ. ಅಂದರೆ, ನಮ್ಮ ನಡೆಯ ಪ್ರತಿ ಹಂತದಲ್ಲೂ ನಮ್ಮೊಳಗಿರುವ ಆತ್ಮಸಾಕ್ಷಿಯನ್ನು ಜಾಗೃತವಾಗಿಡಬೇಕು, ತನ್ಮೂಲಕ ನಮ್ಮ ಕರ್ತವ್ಯವನ್ನು ನಿರ್ವಹಿಸಬೇಕು. ದೇಶಕ್ಕೆ ಮತ್ತು ಧರ್ಮಕ್ಕೆ ಕರ್ತವ್ಯ ಎಂಬುದು ಅತ್ಯಂತ ವಿಶಾಲವಾದ ಅರ್ಥವನ್ನು ನೀಡುತ್ತದೆ. ಈ ಅರ್ಥವು ನಮ್ಮ ವೈಯಕ್ತಿಕ, ಸಾಮಾಜಿಕ, ಧಾರ್ಮಿಕ ಕ್ರಿಯೆಗಳನ್ನು ಒಳಗೊಂಡಿರುತ್ತದೆ ಮತ್ತು ಅತಿ ಹೆಚ್ಚಿನ ಜವಾಬ್ದಾರಿಯನ್ನು ನಾವೇ ಸ್ವೀಕರಿಸುತ್ತೇವೆ. ಇತರರಿಗೆ ಸಹಾಯ ಮಾಡುವುದು : ನಮ್ಮ ವ್ಯಕ್ತಿತ್ವದ ವಿಕಸನದ ಭಾಗವಾಗಿದೆ. ಸಮಾಜವೆಂದರೆ, ನಾವು ಮತ್ತು ನಮ್ಮೊಂದಿಗಿರುವ ಇತರರು. ಈ ಪ್ರತಿಜ್ಞಾವಿಧಿಯ ಮೂಲಕ ನಾವು ಸತತ ಸಾಮಾಜಿಕ ಸೇವೆಗೆ ಬದ್ಧರಾಗುತ್ತೇವೆ.

ಸ್ಕೌಟ್ ನಿಯಮ ಪ್ರತಿಜ್ಞಾವಿಧಿಗೆ ಪೂರಕವಾಗಿದೆ. ಒಬ್ಬ ಸ್ಕೌಟ್ ಎಂದರೆ, ವಿಶ್ವಾಸಾರ್ಹ, ನಿಷ್ಠ, ಎಲ್ಲರ ಸ್ನೇಹಿತ, ಸಹ ಸ್ಕೌಟ್‌ಗಳ ಸಹೋದರ, ವಿನಯಶೀಲ, ಪ್ರಾಣಿ ಮಿತ್ರ, ಪ್ರಕೃತಿ ಪ್ರಿಯ, ಶಿಸ್ತುಬದ್ಧ, ಮತ್ತು ಸಾಮಾಜಿಕ ಆಸ್ತಿ-ಪಾಸ್ತಿಯ ಸಂರಕ್ಷಕ, ಧೈರ್ಯವಂತ, ಉಳಿತಾಯಗಾರ ಮತ್ತು ಆಲೋಚನೆ, ಮಾತು ಮತ್ತು ಕಾರ್ಯನಿರ್ವಹಣೆಯಲ್ಲಿ ಶುದ್ಧ ವ್ಯಕ್ತಿತ್ವವುಳ್ಳವನು ಎಂದು ನಿಯಮ ಸಾರಿದೆ. ಈ ನಿಯಮವನ್ನು ನಾವು ನಿಷ್ಠರಾಗಿ ಪಾಲಿಸುವುದರಿಂದ ಸಾಮಾಜಿಕ ಬದಲಾವಣೆಯನ್ನು ಖಂಡಿತಾ ತರಬಹುದು. ಒಬ್ಬ ಸ್ಕೌಟ್ ಸಮಾಜದಲ್ಲಿ ವಿಭಿನ್ನ ನಾಗರೀಕನಾಗಿ, ನಾಯಕನಾಗಿ, ಅನುಕರಣೀಯ ವ್ಯಕ್ತಿಯಾಗಿ ಕಾಣುತ್ತಾನೆ. ಈ ಗುಣಗಳನ್ನು ಸ್ಕೌಟ್ ಮತ್ತು ಗೈಡ್‌ಗಳು ಮೈಗೂಡಿಸಿಕೊಂಡರೆ, ಇಂದಿನ ಹಲವಾರು ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರವನ್ನು ಕಾಣಬಹುದೆಂದು ನನಗೆ ಅನ್ನಿಸುತ್ತದೆ.

ಪ್ರಸ್ತುತ ಸಮಾಜದಲ್ಲಿ ಹಿಂಸೆ, ಸ್ವಜನ ಪಕ್ಷಪಾತ, ಭ್ರಷ್ಟಾಚಾರ, ಅನೈಕ್ಯತೆ, ಧನದಾಹ ಮತ್ತು ವೈಯಕ್ತಿಕ ನಡವಳಿಕೆಯ ಅಧ:ಪತನವನ್ನು ನಾವು ಕಾಣುತ್ತಿದ್ದೇವೆ. ದಿನದಿಂದ ದಿನಕ್ಕೆ ಸಾಮಾಜಿಕ ಮೌಲ್ಯಗಳ ಕುಸಿತ ನೋವಿನ ಸಂಗತಿಯಾಗಿದೆ. ಹಲವಾರು ಸಂದರ್ಭಗಳಲ್ಲಿ ಭ್ರಷ್ಟಾಚಾರ ಮತ್ತು ಸ್ವಾರ್ಥ, ಹಿಂಸೆಯ ವೈಭವೀಕರಣವಾಗುತ್ತದೆ. ಮಾದರಿ ವ್ಯಕ್ತಿತ್ವಗಳು ಕಾಣೆಯಾಗುತ್ತಿವೆ.

ಚಿಂತನಾ ಮತ್ತು ಭ್ರಾತೃತ್ವದ ದಿನಾಚರಣೆಯ ಈ ಸಂದರ್ಭದಲ್ಲಿ ನಾವು ಮೇಲ್ಕಾಣಿಸಿದ ವಿಷಯಗಳ ಬಗ್ಗೆ ಚಿಂತನೆ ಮತ್ತು ಚರ್ಚೆಯನ್ನು ಮಾಡಬೇಕಾಗಿದೆ. ವ್ಯಕ್ತಿ ನಿರ್ಮಾಣದ ಮೂಲಕ ಉತ್ತಮ ಸಮಾಜವನ್ನು ನಾವು ಕಟ್ಟಬೇಕಿದೆ. ಧರ್ಮ, ಭಾಷೆ, ಬಣ್ಣ, ಜಾತಿ, ಲಿಂಗತಾರತಮ್ಯಗಳು ಸಮಾಜವನ್ನು ಒಡೆಯಬಾರದು. ಇದು ದೊಡ್ಡ ಕೆಲಸ. ಈ ಜವಾಬ್ದಾರಿ ನಮ್ಮಮೇಲಿದೆ. ನಾವು ಪ್ರತಿಯೊಬ್ಬರೂ ಮೊದಲು ಮಾದರಿ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕು. ಇತರರನ್ನು ರೂಪಿಸಬೇಕು. ಸತತ ಚಿಂತನೆ, ಪರಿಶ್ರಮಗಳ ಮೂಲಕ ಈ ಬಹುದೊಡ್ಡ ಕಾಣಿಕೆಯನ್ನು ನಾವು ಸಮಾಜಕ್ಕೆ ನೀಡಬಹುದೆಂಬುದು ನನ್ನ ಆಶಯ.

ಮಾನ್ಯ ರಾಜ್ಯಪಾಲರಾದ ವಾಜುಬಾಯಿ ರೂಢಾಬಾಯಿ ವಾಲಾರವರು, ದಿನಾಂಕ:03.02.2017 ರಂದು ರಾಜಭವನದಲ್ಲಿ ನಡೆದ ಪ್ರಶಸ್ತಿಪತ್ರ ಪ್ರಧಾನ ಸಮಾರಂಭದಲ್ಲಿ ಮಾತನಾಡುತ್ತಾ "ಮಕ್ಕಳು ಜ್ಞಾನ ಮಾತ್ರವಲ್ಲದೇ ಉತ್ತಮ ಚಾರಿತ್ರ್ಯವನ್ನು ರೂಢಿಸಿಕೊಳ್ಳುವ ಮೂಲಕ ಸಮಾಜದ ರಾಕ್ಷಸೀ ಮನೋಭಾವನ್ನು ನಾಶಪಡಿಸಲು ಸಮರ ಸಾರಬೇಕು" ಎಂದು ಹೇಳುವುದರ ಮೂಲಕ ನನ್ನ ಆಲೋಚನೆಗೆ ಪುಷ್ಠಿ ನೀಡಿದ್ದಾರೆ ಎಂದು ಅನ್ನಿಸುತ್ತದೆ. ಅಂದಿನ ಕಾರ್ಯಕ್ರಮದಲ್ಲಿ ಮಾತನಾಡಿದ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರಾದ ಮಾನ್ಯ ಶ್ರೀ ತನ್ವೀರ್ ಸೇಠ್‌ರವರು "ಮಕ್ಕಳು ಹೃದಯ ಶ್ರೀಮಂತಿಕೆ, ಸಾಮಾಜಿಕ ಬದ್ಧತೆ, ದೇಶ ಪ್ರೇಮ, ಪ್ರೀತಿ, ವಾತ್ಸಲ್ಯಗಳನ್ನು ರೂಢಿಸಿಕೊಳ್ಳಬೇಕು" ಎಂದು ಕರೆ ನೀಡಿದರು. ಈ ಹೇಳಿಕೆಗಳು ಮತ್ತು ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಯ ಸಂದರ್ಭದಲ್ಲಿ ಭಾರತದ ರಾಷ್ಟ್ರಪತಿಗಳು, ಕರ್ನಾಟಕದ ಮುಖ್ಯಮಂತ್ರಿಗಳು, ಮತ್ತಿತರ ನಾಯಕರುಗಳು ಆಡಿರುವ ಮಾತುಗಳು ನಮ್ಮ ಸಂಸ್ಥೆಯ ಮೇಲೆ ಅವರೆಲ್ಲರೂ ಇಟ್ಟಿರುವ ವಿಶ್ವಾಸ ಮತ್ತು ನಾವು ಭರಿಸಬೇಕಾದ ಜವಾಬ್ದಾರಿಯ ಸೂಚಕ. ನಾವುಗಳೆಲ್ಲಾ, ಈ ಜವಾಬ್ದಾರಿಯನ್ನು ನಿರ್ವಹಿಸಲು ಸಮರ್ಥರಾಗಿದ್ದೇವೆ ಎಂದು ನಾನು ಭಾವಿಸುತ್ತೇನೆ.

ಪ್ರಸ್ತುತ ಸಾಲಿನಲ್ಲಿ 4,701 ಮಂದಿಗೆ ಪ್ರಮಾಣ ಪತ್ರ ವಿತರಿಸಲಾಗಿದೆ. ಚತುರ್ಥ ಚರಣ್ ಕಬ್ಸ್– 935, ಹೀರಕ್ ಪಂಖ್ ಬುಲ್‌ಬುಲ್ಸ್–869, ರಾಜ್ಯ ಪುರಸ್ಕಾರ ಸ್ಕೌಟ್ಸ್–1472, ರಾಜ್ಯ ಪುರಸ್ಕಾರ್ ಗೈಡ್ಸ್–1166, ರಾಜ್ಯ ಪುರಸ್ಕಾರ್ ರೋವರ್ಸ್ – 119, ರಾಜ್ಯ ಪುರಸ್ಕಾರ್ ರೇಂಜರ್ಸ್‌ನ 140 ವಿದ್ಯಾರ್ಥಿಗಳಿಗೆ ಪ್ರಮಾಣ ಪತ್ರ ವಿತರಿಸಲಾಗಿದೆ. ಎಲ್ಲಾ ಪ್ರಶಸ್ತಿ ವಿಜೇತರು ಶ್ರಮವಹಿಸಿ ಸಂಬಂಧಿಸಿದ ಪರೀಕ್ಷೆಗಳಲ್ಲಿ ಯಶಸ್ಸುಗಳಿಸಿದ್ದಾರೆ. ನಾನು ಪ್ರತಿಯೊಬ್ಬರನ್ನೂ ಅಭಿನಂದಿಸುತ್ತೇನೆ. ಅವರೆಲ್ಲರೂ ಸ್ಕೌಟಿಂಗ್‌ನಲ್ಲಿ ಮುಂದಿನ ಹಂತಗಳಲ್ಲಿ ಯಶಸ್ಸನ್ನುಗಳಿಸಿ ಸಾಮಾಜಿಕವಾಗಿ ಸಂಗತವಾಗಲಿ ಎಂದು ಬಯಸುತ್ತೇನೆ.

ಫೆಬ್ರವರಿ ತಿಂಗಳಿನಲ್ಲಿ ಕೆಲವು ಪ್ರಮುಖ ದಿನಾಚರಣೆಗಳಿವೆ. ವಿಶೇಷವಾಗಿ ಫೆಬ್ರವರಿ 4 ರಂದು ವಿಶ್ವ ಕ್ಯಾನ್ಸರ್ ದಿನ, ಫೆಬ್ರವರಿ 20 ರಂದು ವಿಶ್ವ ಸಾಮಾಜಿಕ ದಿನ, ಕ್ಯಾನ್ಸರಿನ ಬಗ್ಗೆ ಜಾಗೃತಿಯನ್ನು ಮೂಡಿಸುವ, ಸಾಮಾಜಿಕ ಕಳಕಳಿಯನ್ನುಂಟುಮಾಡುವ ಕಾರ್ಯಕ್ರಮಗಳನ್ನು ನಾವು ಹೂಡಿಕೊಳ್ಳಬೇಕು.

ಫೆಬ್ರವರಿ 21 ರಂದು ಅಂತರರಾಷ್ಟ್ರೀಯ ತಾಯಿ ನುಡಿಯ ದಿನ. ರಾಷ್ಟ್ರೀಕರಣ ಮತ್ತು ಜಾಗತೀಕರಣದ ವೇಗದಲ್ಲಿ ಪ್ರಪಂಚದಾದ್ಯಂತ, ವಿಶೇಷವಾಗಿ ಭಾರತದಲ್ಲಿ ತಾಯಿ ನುಡಿಗೆ ತೀವ್ರವಾದ ಅಪಾಯ ಉಂಟಾಗಿದೆ. ಮಕ್ಕಳು ಮಾತೃಭಾಷಾ ಮಾಧ್ಯಮದಿಂದ ದೂರ ಸರಿಯುತ್ತಿದ್ದಾರೆ. ನಮ್ಮ ಚಿಂತನೆಗಳು, ಮಾತು–ಕತೆಗಳು ಅನ್ಯ ಭಾಷೆಯ ಮೇಲೆ ಅವಲಂಬಿತವಾಗಿ ಮೂಲ ಶಕ್ತಿಯನ್ನು, ಸಂಸ್ಕೃತಿಯನ್ನು ಕಳೆದುಕೊಳ್ಳುತ್ತಿವೆ. ಸಂಸ್ಕೃತಿಯು ಸಮಾಜದ ಚೈತನ್ಯ. ಸಾವಿರಾರು ವರ್ಷಗಳ ಚಿಂತನೆ, ಅನುಭವ ಮತ್ತು ಕೊಡು–ಕೊಳ್ಳುವಿಕೆಯ ಮೂಲಕವಾಗಿ ಸಂಸ್ಕೃತಿಯು ರೂಪುಗೊಂಡಿರುತ್ತದೆ. ಇದನ್ನು ಮುಂದಿನ ಜನಾಂಗಗಳಿಗೆ ತಲುಪಿಸಬೇಕಾದರೆ ತಾಯಿ ನುಡಿಯು ಬಹಳ ಅಗತ್ಯ.

ತಾಯಿ ನುಡಿಯನ್ನು ಸಶಕ್ತಗೊಳಿಸಬೇಕಾದ್ದು ನಮ್ಮೆಲ್ಲರ ಮತ್ತು ಸರ್ಕಾರಗಳ ಆದ್ಯ ಕರ್ತವ್ಯವಾಗಿದೆ. ಇಂದಿನ ಅಗತ್ಯಗಳಿಗೆ ಅನುಗುಣವಾಗಿ ವೈಜ್ಞಾನಿಕವಾಗಿ ಭಾಷೆಯನ್ನು ಬೆಳೆಸಬೇಕು. ಕನ್ನಡವು ಎರೆಡು ಸಾವಿರಕ್ಕಿಂತಲೂ ಹೆಚ್ಚು ವರ್ಷಗಳ ಭಾಷೆ. ಅಪಾರವಾದ ಪದಸಂಪತ್ತು, ಸಾಹಿತ್ಯ, ಅನುಭವ ಇಲ್ಲಿದೆ. ಇಪ್ಪತ್ತನೆಯ ಶತಮಾನದಲ್ಲಿ ಆಧುನಿಕ ಭಾಷೆಯಾಗಿ ಕನ್ನಡ ಬೆಳೆಯಿತು. ವಿಜ್ಞಾನವೂ ಸೇರಿದಂತೆ, ಎಲ್ಲಾ ಶಾಸ್ತ್ರಗಳನ್ನು, ಸಾಹಿತ್ಯಗಳನ್ನು ಕನ್ನಡದ ಮೂಲಕ ಅಭಿವ್ಯಕ್ತಿಸಬಹುದಾಗಿದೆ. ಅದಕ್ಕೆ ಸತ್ವ ತುಂಬುವುದು ನಮ್ಮ ಜವಾಬ್ದಾರಿ. ತಾಯಿ ನುಡಿಯನ್ನು "ಅನ್ನದ ಭಾಷೆ"ಯನ್ನಾಗಿ ದುಡಿಸಿಕೊಳ್ಳುವುದು ಸಂಬಂಧಿಸಿದ ಸರ್ಕಾರಗಳ ಜವಾಬ್ದಾರಿಯಾಗಿದೆ.

**ಮಾರ್ಚ್ 8ರಂದು "ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ" ಕಾರ್ಯಕ್ರಮವನ್ನು ಎಲ್ಲಾ ಜಿಲ್ಲಾ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು ಹಾಗೂ ತಮ್ಮ ಘಟಕ ಹಂತಗಳಲ್ಲಿ ಆಚರಿಸುವುದು ಉತ್ತಮ.**



ಎರಡನೇಯ ವರ್ಷವೂ ಕರ್ನಾಟಕ ದರ್ಶನವು ಯಶಸ್ವಿಯಾಗಿ ನಡೆದಿದೆ. ಮುಂದಿನ ವರ್ಷ ಹತ್ತುಸಾವಿರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಕರ್ನಾಟಕ ದರ್ಶನದಲ್ಲಿ ಭಾಗವಹಿಸಲು ಪ್ರಯತ್ನಿಸಲಾಗುವುದು. ಈ ಕಾರ್ಯಕ್ರಮಕ್ಕೆ ಸತತವಾಗಿ ಸಹಾಯ ನೀಡುತ್ತಿರುವ ಕರ್ನಾಟಕ ರಾಜ್ಯ ಸರ್ಕಾರಕ್ಕೆ ನಾನು ಆಭಾರಿಯಾಗಿದ್ದೇನೆ. ಮುಂದಿನ ವರ್ಷದಿಂದ ರಾಷ್ಟ್ರಪತಿ ಪದಕ ಅರ್ಹತಾ ಸಾಲಿನಲ್ಲಿರುವ ವಿದ್ಯಾರ್ಥಿಗಳಿಗೆ ಭಾರತ ದರ್ಶನದ ಅವಕಾಶ ಮಾಡಿಕೊಡಬೇಕೆಂದು ನಾವು ಸರ್ಕಾರವನ್ನು ಕೇಳಿಕೊಂಡಿದ್ದೇವೆ.

ಇತ್ತೀಚಿಗೆ ಮಂಗಳೂರಿಗೆ ಭೇಟಿ ಕೊಟ್ಟಾಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜಲತರಬೇತಿ ಕೇಂದ್ರದ ಸ್ಥಾಪನೆಗಾಗಿ ಪ್ರಶಸ್ತವಾದ ಸ್ಥಳವನ್ನು ಹುಡುಕಿ ಜಮೀನು ಒದಗಿಸಬೇಕೆಂದು ಜಿಲ್ಲಾಡಳಿತಕ್ಕೆ ಮನವಿ ಮಾಡಿದ್ದೇನೆ. ಜಲತರಬೇತಿ ಕೇಂದ್ರ ಸ್ಥಾಪನೆಗೆ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ನೆರವು ನೀಡಲಿವೆ. ಈ ತರಬೇತಿಯ ಮೂಲಕವಾಗಿ ಮಕ್ಕಳು ಭವಿಷ್ಯದಲ್ಲಿ ಸೇನೆ, ಪೊಲೀಸು ಮುಂತಾದ ಸಂಸ್ಥೆಗಳಲ್ಲಿ ಕೆಲಸವನ್ನು ಪಡೆಯಬಲ್ಲರು. ಹೆಚ್ಚಾಗಿ ಅಂತರರಾಷ್ಟ್ರೀಯ ಮಟ್ಟದ ಈಜುಗಾರರನ್ನು ನಾವು ತಯಾರು ಮಾಡಬಹುದಾಗಿದೆ. 2017ರಲ್ಲಿ ರಾಜ್ಯ ಮಟ್ಟದ ಜಾಂಬೂರಿಯನ್ನು ಆಯೋಜಿಸಬೇಕಾಗಿದೆ.




**ರಾಜ್ಯದಲ್ಲಿ ಈ ವರ್ಷ ಬರಗಾಲ ಇದ್ದು, ನೀರಿನ ಕೊರತೆ ತೀವ್ರವಾಗಿದೆ, ಆದ್ದರಿಂದ ನೀರಿನ ಬಳಕೆ ಮತ್ತು ಸಂಗ್ರಹದ ಬಗ್ಗೆ ಜನರಲ್ಲಿ ಜಾಗೃತಿಯನ್ನು ಮೂಡಿಸಲು ಸರ್ಕಾರ ಮತ್ತು ಇತರ ಸಂಘ ಸಂಸ್ಥೆಗಳ ಜೊತೆ ಸೇರಿಕೊಂಡು ನಾವುಗಳು ಜಾಗೃತಿಯಲ್ಲಿ ತೊಡಗಿಸಿಕೊಳ್ಳುವುದು ಅಗತ್ಯವಾಗಿದೆ.**

ಕಳೆದ ತಿಂಗಳಿನಲ್ಲಿ ನಾನು ಚಿತ್ರದುರ್ಗ, ಹೊನ್ನಾಳಿ, ಮಧುಗಿರಿ, ಮೈಸೂರು, ತುಮಕೂರು, ಚಿಕ್ಕಬಳ್ಳಾಪುರ, ಮಂಗಳೂರು, ದಾವಣಗೆರೆ, ಕಾರವಾರ(ಹೊನ್ನಾವರ) ಮತ್ತು ಗದಗ ಜಿಲ್ಲಾ ಸಂಸ್ಥೆಗಳಿಗೆ ಭೇಟಿ ಕೊಟ್ಟು ಸಂಸ್ಥೆಯ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸಿದ್ದೇನೆ.

ನಿಮಗೆಲ್ಲರಿಗೂ ಶಿವರಾತ್ರಿ ಶುಭಾಶಯಗಳು. ಶಿವರಾತ್ರಿಯ ಜಾಗರಣೆ ಎಂದರೆ, "ಕತ್ತಲಿನಲ್ಲಿ ಎಚ್ಚರವಾಗಿರುವುದು",. ನಮ್ಮ ಹಿರಿಯರು ಹಬ್ಬಗಳನ್ನು ಅರ್ಥಪೂರ್ಣವಾಗಿ ರೂಪಿಸಿದ್ದಾರೆ. ಅವುಗಳ ಆಂತರ್ಯವನ್ನು ಅರಿತು ನಾವು ಸಮೃದ್ಧ ಸಮಾಜವನ್ನು ನಿರ್ಮಾಣ ಮಾಡಬೇಕಿದೆ.

**"ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"**
**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

ತಮ್ಮ ವಿಶ್ವಾಸಿ

**ಪಿ.ಜಿ.ಆರ್. ಸಿಂಧ್ಯ**
ರಾಜ್ಯ ಮುಖ್ಯ ಆಯುಕ್ತರು

# ಅಭಿನಂದನೆಗಳು

ದೇಶದ ಅತ್ಯುನ್ನತ ನಾಗರೀಕ ಪುರಸ್ಕಾರವಾದ "ಪದ್ಮಪ್ರಶಸ್ತಿ"ಗಳನ್ನುಗಳಿಸಿ ಕರ್ನಾಟಕದ ಕೀರ್ತಿ ಪತಾಕೆಯನ್ನು ಮೇಲಕ್ಕೇರಿಸಿದ ಗಣ್ಯರಿಗೆ ಕರ್ನಾಟಕ ಸ್ಕೌಟ್-ಗೈಡ್ ಸಂಸ್ಥೆಯ ಪರವಾಗಿ ಹಾರ್ದಿಕ ಅಭಿನಂದನೆಗಳು


ಪ್ರೊ. ಯು.ಆರ್. ರಾವ್
ಖ್ಯಾತ ವಿಜ್ಞಾನಿ
ಪದ್ಮವಿಭೂಷಣ


ಶ್ರೀ ಜಗ್ಗಿ ವಾಸುದೇವ
ಆಧ್ಯಾತ್ಮ ಗುರು
ಪದ್ಮವಿಭೂಷಣ


ಪ್ರೊ. ವೆಂಕಟಸುಬ್ಬಯ್ಯ
ನಿಘಂಟು ತಜ್ಞ
ಪದ್ಮಶ್ರೀ


ಶ್ರೀಮತಿ ಸುಕ್ರಿ ಬೊಮ್ಮಗೌಡ
ಹಾಲಕ್ಕಿ ಜಾನಪದ ಗಾಯಕಿ
ಪದ್ಮಶ್ರೀ


ಶ್ರೀಮತಿ ಭಾರತಿ ವಿಷ್ಣುವರ್ಧನ್
ನಟಿ
ಪದ್ಮಶ್ರೀ


ಶ್ರೀ ಚ.ಮೂ. ಕೃಷ್ಣಶಾಸ್ತ್ರಿ
ಸಂಸ್ಕೃತ ವಿದ್ವಾಂಸ
ಪದ್ಮಶ್ರೀ


ಶ್ರೀ ವಿಕಾಸ್ ಗೌಡ
ಕ್ರೀಡಾಪಟು
ಪದ್ಮಶ್ರೀ


ಶ್ರೀ ಶೇಖರ್ ನಾಯಕ್
ಅಂಧರ ಕ್ರಿಕೇಟ್ ತಂಡದ ನಾಯಕ
ಪದ್ಮಶ್ರೀ

## Congratulations to the Following Members of Karnataka State Association who occupy different Offices at National Association for the Term 2016-2021

**Sri P. Vishwanath**
DCC, Mysuru, Appointed as International Commissioner


**Smt. Geetha Nataraj**
State Commissioner (G)
Elected as Vice-President


**Sri Kondajji B. Shanmukhappa**
Vice-President, Elected as
National Executive Committee Member


**Smt. P. Saroja**
DCC, Bengaluru North
Appointed as Headquarters
Commissioner for Guide Section


**Sri Mohan Kondajji**
Headquarters Commissioner
Appointed as Headquarters
Commissioner for PRO


**Smt. Janaki Venugopal**
Hqrs. Commissioner, Elected as
National Executive Committee Member


**Smt. Madhuri Devadhar**
DCC, Haveri Elected as
National Finance Committee Member




# SRI VAJUBHAI VALA
## GOVERNOR OF KARNATAKA
### Presented Certificates to Cubs-Bulbuls, Scouts-Guides, Rovers-Rangers

The Presentation ceremony of Chathurtha Charan, Heerak Pankh and Rajyapuraskar Certificates to the Cubs, Bulbuls, Scouts, Guides ,Rovers and Rangers was held on 3rd February 2017 at 11.00 A.M at Glass House, Raj Bhavan, Bengaluru.

Shri Vajubhai Vala, Hon'ble Governor of Karnataka and the Patron of Bharat Scouts and Guides, Karnataka presented the Certificates.



Shri Tanveer Sait, Hon'ble Minister for Primary & Secondary Education and Wakf and Vice President of Bharat Scouts & Guides Karnataka spoke on the occasion and expressed his view about the successful conduct of the 17th National Jamboree of Scouts & Guides held at Adakanahalli Industrial Area, Mysuru from 29th Dec 2016 to 4th Jan 2017 under the able Leadership of Sri P.G.R. Sindhia State Chief Commissisoner.

He further said that the Government of Karnataka, under the Leadership of Shri Siddaramaiah, Hon'ble Chief Minister of Karnataka and the Department of Public Instruction will encourage the Introduction of Scouts & Guides Units in all the Educational Institutions of Karnataka and extend all the support and co-operation for the growth of the movement in the State.

Shri P.G.R. Sindhia, State Chief Commissioner ,The Bharat Scouts & Guides Karnataka, addressed the participants and expressed his gratitude to the Hon'ble Governor of Karnataka for accepting to present the Award Certificates to the Cubs, Bulbuls, Scouts, Guides, Rovers and Rangers at Raj Bhavan.



In his address he also thanked Sri Siddaramaiah, Honble Chief Minister of Karnataka and President, The Bharat Scouts and Guides, Karnataka, for extending full support for the successful conduct of the 17th National Jamboree at Mysuru. He also thanked the Unit Leaders for the sustained support for the growth of the Movement in the State.

In his address Shri Vajubhai Vala, Hon'ble Governor of Karnataka Said that the Karnataka State Bharat Scouts & Guides is rendering good services in the field of Scouting & Guiding. He appealed to the parents to admit their children to the Scout Movement for their overall Personality Development. Further he said that the Scouts , Guides, Rovers & Rangers and

the Unit Leaders should serve the country for the better progress and for the unity and integreity of our country. He said that Scouting & Guiding means Education for Life. Scouting & Guiding must be understood as not merely accumulating of Badges but an enrichment of life skills through proper understanding and awareness of the social and National needs.

He Congratulated the Cubs, Bulbuls Scouts ,Guides ,Rovers and Rangers who have received the certificates.

935 Cubs, 869 Bulbuls, 1472 Scouts, 1166 Guides, 119 Rovers and 140 Rangers were eligible to receive the certificates in Karnataka for the year 2016-17. Out of the above 700 Awardees participated in the Rally.

Earlier Sri Chinnaswamy Reddy, State Secretary, Welcomed the Governor, the Minister, Invitees, Media representatives, Parents and the participants. Smt S.K.Prabha, Joint State Secretary (Guide) proposed the Vote of thanks. Sri Kondajji B. Shanmukhappa, Vice-President, Smt Geetha Nataraj, State Commissioner (G), Assistant State Commissioners and Headquarters Commissioners were also present on the occassion.

Sri M.A. Chellaiah, Public Relation Officer Co-ordinated the event, assisted by Sri M. Prabhakar Bhat, Smt. C. Manjula, State Organising Commissioners, Sri L.T. Lokesh and Smt. K.V. Shamala, State Training Commissioners.



Vishwaprajna Academy School, Bengaluru South Presented a Cultural Programme.

Earlier a get together programme for Cubs, Bulbuls, Scouts, Guides, Rovers and Rangers was held on 02.02.2017 at State Headquarters, Shanthigruha.



A Campfire was arranged at 7 p.m. Sri S.G.Ravindra, I.I.S., Special Commissioner, (Education Welfare Harticulture Estates) Bruhat Bengaluru Mahanagara Palike was the Chief Guest at the Camp Fire Ceremony. He addressed the participants and congratulated them for receiving the State Awards from the hands of the Hon'ble Governor of Karnataka. He also appealed to the Scouts and Guides to render Community Service for wellbeing of the Society.

Sri P.G.R. Sindhia, State Chief Commissioner, Sri Kondajji B. Shanmukhappa Vice-President, Prof. Ramakrishna, Sri M.A. Chellaiah, Public Relation Officer, Smt S.K. Prabha, Joint State Secretary (G), Sri N.Srinivasan, Headquarters Commissioner (S) Programmes were present.

Cultural Programmes were presented by various Schools during the Camp Fire.

# Pre ALT Course for Scout Wing and Guide Wing

Courses on Pre ALT for Scout Wing and Guide Wing were held at Dr Annie Besant Scouts & Guide Training and Camping Centre, Doddaballapura, Bangalore from 13th to 17th 2017.

The Camp started with registration at 10 a.m. Informal Inauguration combined with integration session was held after Flag ceremony.

Miss P. Saroja, former Director NHQ and former SOC(G) Karnataka Inaugurated the camp with her good wishes. Sri S.S Ray, LT(C) and Assisstant Director Eastern Region BS&G India was the leader of Scout Wing. Sri N. Srinivasan, LT(S) HQS, BSG Karnataka Sri Sharaff Madappa, LT(S) Chamarajnagar, Sri V.M Ramachandra, LT(S) Chamrajnagar and Sri K.S. Pratheem Kumar, LT(S) Mangalore were on the Staff. There were 27 Candidates drawn from 17 districts of the State. Smt Machamma, L.T.(G), Deputy Director (G), L.T was the Leader of the Guide wing. Smt P. Saroja, L.T(G), Smt Kumari Honnama, ALT (G) were on staff. There were 38 candidates from 13 districts of the state. Subject were dealt with, as per SOT & Micro teaching. Practice by the Candidates was the Highlight of the course.

Sri P.G.R. Sindhia, State Chief Commissioner, B&S Karnataka visited the camp on 14th Feb 2017 and addressed the campers. He urged the candidates to utilise the opportunity to the full extent to go up in the ladder to become a trainer. Sri M. Prabhakar bhat, SOC(S) Bharat Scouts and Guides, Karnataka also spoke on this occasion. Smt Geetha Nataraj, Vice President, BSG New Delhi and SC(G), BS&G Karantaka visted the camp on 15th and 16th feb 2017 and taught a few subjects.

Sri Lokesh, STC(S), BS&G, Karnataka and Smt K.V.Shamala, STC(G) BSG, Karnataka Co-ordinated the whole Programme, 3 Rovers from GFGC Kolar rendred valuable service during the course.






# 17ನೇ ರಾಷ್ಟ್ರೀಯ ಜಾಂಬೂರಿಯ ಸವಿನೆನಪುಗಳು

ಕಥನಕಾರರು:
ಶ್ರೀಮತಿ ಎಸ್.ಕೆ. ಪ್ರಭಾ, ಎಲ್.ಟಿ. (ಗೈಡ್ಸ್)
ರಾಜ್ಯ ಜಂಟಿ ಕಾರ್ಯದರ್ಶಿ

ಹಿಂದಿನ ಸಂಚಿಕೆಯಿಂದ . . .

ಡಿಸೆಂಬರ್ 29, 2016ರಂದು ಜಾಂಬೂರಿಯ ಉದ್ಘಾಟನೆ ಎಂದು ಹೇಳ ಹೇಳುತ್ತಿದ್ದಂತೆಯೆ ಆ ದಿನ ಬಂದೇ ಬಿಟ್ಟಿತು. ಎಲ್ಲಾ ವ್ಯವಸ್ಥೆಗಳು ನಡೆದು ಕ್ಷಣಗಣನೆ ಪ್ರಾರಂಭವಾಯಿತು. ವಿವಿಧತೆಯಲ್ಲಿ ಏಕತೆ ವೈಭವೀಕರಿಸುತಿತ್ತು. ಅಂದೇ ರಾಷ್ಟ್ರಕವಿ ಕುವೆಂಪು ಅವರ ಹುಟ್ಟುಹಬ್ಬ. ಅವರ ಕವನದ "ಸರ್ವಜನಾಂಗದ ಶಾಂತಿಯ ತೋಟ" ಎಂಬ ಸಾಲು ಸಾಕ್ಷಾತ್ಕಾರಗೊಂಡಿದ್ದು ಒಂದು ವಿಶೇಷ. ಸಮವಸ್ತ್ರ ತೊಟ್ಟ ಮಕ್ಕಳು ಪ್ರಾಂಗಣದಲ್ಲಿ ಆಸೀನರಾಗಿದ್ದರು. ಕೆಲವು ಮಕ್ಕಳು ಸಾಂಸ್ಕೃತಿಕ ಕಾರ್ಯಕ್ರಮ ನೀಡಲು ತಮ್ಮ ತಮ್ಮ ರಾಜ್ಯದ ಉಡುಪು ತೊಟ್ಟು ಕಂಗೊಳಿಸುತ್ತಿದ್ದರು. ಕೆಲವು ಮಕ್ಕಳು ಸಮವಸ್ತ್ರದಲ್ಲಿ ರಾಷ್ಟ್ರಪತಿಗಳಿಗೆ ವಂದನೆ ಸಲ್ಲಿಸಲು ಶಿಸ್ತಾಗಿ ಸಿದ್ಧರಾಗಿ ನಿಂತಿದ್ದರು. ವೇದಿಕೆ ಭವ್ಯವಾಗಿ ಸಜ್ಜಾಗಿತ್ತು. ಆಹ್ವಾನಿತರು ಆಸೀನರಾಗಿದ್ದರು. ಗಣ್ಯರು ರಾಷ್ಟ್ರಪತಿಗಳ ನಿರೀಕ್ಷೆಯಲ್ಲಿದ್ದರು.

ರಾಷ್ಟ್ರಪತಿ ಶ್ರೀ. ಪ್ರಣಬ್ ಮುಖರ್ಜಿಯವರು ಆಗಮಿಸಿದರು. ಅವರನ್ನು ನಮ್ಮ ರಾಜ್ಯಪಾಲರು, ಮುಖ್ಯಮಂತ್ರಿಗಳು, ಮಂತ್ರಿಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಜ್ಯ ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ. ಪಿ.ಜಿ.ಆರ್. ಸಿಂಧ್ಯ ಹಾಗು ಪದಾಧಿಕಾರಿಗಳು ರಾಷ್ಟ್ರೀಯ ಸಂಸ್ಥೆಯ ಅಧ್ಯಕ್ಷರಾದ ಡಾ॥ ಅನಿಲ್ ಜೈನ್, ಮುಖ್ಯ ರಾಷ್ಟ್ರೀಯ ಆಯುಕ್ತರಾದ ಶ್ರೀ ಬಿ.ಐ. ನಾಗರಾಲೆ, ಭಾ.ಆ.ಸೇ(ನಿವೃತ್ತ)ಯವರು ಸ್ವಾಗತಿಸಿದರು. ರಾಷ್ಟ್ರಪತಿಯವರು ತೆರೆದ ವಾಹನದಲ್ಲಿ ಎಲ್ಲಾ ರಾಜ್ಯಗಳ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಘನವಂದನೆ ಸ್ವೀಕರಿಸಿದರು. ನಂತರ ಅವರನ್ನು ವೇದಿಕೆಗೆ ಬರಮಾಡಿಕೊಳ್ಳಲಾಯಿತು. ಸೇನೆಯ ವಾದ್ಯಗೋಷ್ಠಿಯಲ್ಲಿ ರಾಷ್ಟ್ರಗಾನ ಮೊಳಗಿತು. ಅದೊಂದು ಅಭೂತಪೂರ್ವ ಕ್ಷಣವಾಗಿತ್ತು. ಎಲ್ಲರೂ ಗೌರವ ವಂದನೆ ಸಲ್ಲಿಸಿದರು. ರಾಷ್ಟ್ರಪತಿಗಳು ಜಾಂಬೂರಿ ಜ್ಯೋತಿ ಬೆಳಗಿಸುವ ಮೂಲಕ ಜಾಂಬೂರಿಗೆ ಚಾಲನೆ ನೀಡಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಾರ್ಥನೆ ಸಾಮೂಹಿಕವಾಗಿ ಮಾಡಲಾಯಿತು. ಭಾರತ್ ಸ್ಕೌಟ್ಸ್-ಗೈಡ್ಸ್ ಧ್ವಜ, ವಿಶ್ವ ಸ್ಕೌಟ್‌ಧ್ವಜ, ವಿಶ್ವ ಗೈಡ್‌ಧ್ವಜ ಹಾಗೂ ಜಾಂಬೂರಿಯ ಧ್ವಜಗಳನ್ನು ಅರಳಿಸಲಾಯಿತು.





ಮುಖ್ಯ ರಾಷ್ಟ್ರೀಯ ಆಯುಕ್ತರಾದ ಶ್ರೀ. ಬಿ.ಐ. ನಾಗರಾಲೆ, ಭಾ.ಆ.ಸೇ(ನಿವೃತ್ತ) ಇವರು ರಾಷ್ಟ್ರಪತಿಯವರನ್ನು ಗಣ್ಯರನ್ನು ಹಾಗೂ ಉಪಸ್ಥಿತರನ್ನು ಸ್ವಾಗತಿಸಿದರು. ಈ ಜಾಂಬೂರಿ ನಾಲ್ಕು ವರ್ಷಕೊಮ್ಮೆ ನಡೆಯುತ್ತದೆ. ಇದು ಯುವ ಜನತೆಯಲ್ಲಿ, ಕೌಶಲ, ಸ್ನೇಹ ಸಮರ್ಪಣಾ ಭಾವ ಮತ್ತು ದೇಶ ಪ್ರೇಮವನ್ನು ಬೆಳೆಸಲು ಸಹಕಾರಿಯಾಗುತ್ತದೆ ಎಂದರು. ಈ ಬಾರಿ ಒಂದು ಸಾವಿರದಷ್ಟು ಸಾರ್ಕ್ ದೇಶಗಳ ಪ್ರತಿನಿಧಿಗಳು ಭಾಗವಹಿಸಿದ್ದಾರೆಂದು ಹೇಳಿದರು. ಜಾಂಬೂರಿಯ ಕಲಾಪಗಳಿಗೆ ಶುಭ ಹಾರೈಸಿದರು.

ರಾಷ್ಟ್ರೀಯ ಸಂಸ್ಥೆಯ ಅಧ್ಯಕ್ಷರಾದ ಡಾ॥ ಅನಿಲ್ ಜೈನ್‌ರವರು ಜಾಂಬೂರಿಯ ಬಗ್ಗೆ ಪ್ರಾಸ್ತಾವಿಕವಾಗಿ ಮಾತನಾಡಿದರು. ದೇಶದಲ್ಲಿ ಪ್ರಸಕ್ತ 57 ಲಕ್ಷ ಸ್ಕೌಟ್-ಗೈಡ್ ಸದಸ್ಯರಿದ್ದಾರೆ. 2020ರ ವೇಳೆ ಈ ಸಂಖ್ಯೆಯನ್ನು ಒಂದು ಕೋಟಿಗೆ ಏರಿಸುವ ಗುರಿ ಇದೆ ಎಂದರು.

ಪ್ರತಿ ಜಾಂಬೂರಿಯಲ್ಲೂ ಅದರ ಸಂದೇಶವನ್ನು ಒಳಗೊಂಡಂತೆ ಸರಳವಾದ ಹಾಗು ಆಕರ್ಷಕ ರಾಗ ಸಂಯೋಜನೆ ಮಾಡಿ ಗೀತೆಯನ್ನು ರಚಿಸಲಾಗುವುದು. "ಉತ್ತಮ ನಾಳೆಗಾಗಿ ಒಟ್ಟು ಗೂಡೋಣ" ಎಂಬ ಸಂದೇಶ ವಾಕ್ಯ ಒಳಗೊಂಡಂತೆ ಗೀತೆ ರಚಿಸಿ ಹಾಡಲಾಯಿತು. ಈ ಗೀತೆ ಮಕ್ಕಳಲ್ಲಿ ಸ್ಫೂರ್ತಿಯನ್ನು ತುಂಬುವುದು.

**ಗೌರವಾನ್ವಿತ ರಾಷ್ಟ್ರಪತಿ ಶ್ರೀ. ಪ್ರಣಬ್ ಮುಖರ್ಜಿ ಅವರು ಸ್ಕೌಟ್-ಗೈಡ್ ಮಹಾ ಸಮಾವೇಶವನ್ನು ಉದ್ದೇಶಿಸಿ ಮಾತನಾಡಿದರು. ಇವರ ಭಾಷಣದ ಮುಖ್ಯಾಂಶಗಳು.**

ಅನೌಪಚಾರಿಕ ಶಿಕ್ಷಣ ವ್ಯವಸ್ಥೆಯಾಗಿ ರೂಪುಗೊಂಡಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಭಿವೃದ್ಧಿಶೀಲ ದೇಶಗಳಿಗೆ ತನ್ನದೇ ಆದ ಕೊಡುಗೆ ನೀಡಿದ್ದು, ಇದೀಗ ಜಾಗತಿಕ ಯುವ ಚಳವಳಿಯಾಗಿದೆ. ಆದ್ದರಿಂದ ಅಭಿವೃದ್ಧಿ ಸವಾಲುಗಳ ಕುರಿತು ಜಾಗತಿಕ ಹೊಣೆಗಾರಿಕೆಯನ್ನು ಇಂದು ಹೊರಬೇಕಾಗಿದೆ. ಈ ಸಂಘಟನೆಯು ಯುವ ಜನರಲ್ಲಿ ನಾಯಕತ್ವಗುಣ, ಸಹಕಾರ ಸ್ಫೂರ್ತಿ ಮತ್ತು ನೈತಿಕ ಮೌಲ್ಯವನ್ನು ಬಿತ್ತಲು ಪ್ರೇರೆಪಿಸಲಿದೆ. ಈ ಉತ್ಸವ ಕೂಡ ವಿಚಾರ ವಿನಿಮಯ, ಕೌಶಲ ಪ್ರದರ್ಶನ ಮತ್ತು ಪ್ರತಿಭಾ ಪ್ರದರ್ಶನಕ್ಕೆ ಉತ್ತಮ ವೇದಿಕೆಯಾಗಿದೆ. ರಾಷ್ಟ್ರೀಯ ಭ್ರಾತೃತ್ವ, ಸೇವಾ ಮನೋಭಾವ, ಶಿಸ್ತು, ರಾಷ್ಟ್ರಪ್ರೇಮಗುಣ ತುಂಬಲು ಇದು ಉತ್ತೇಜನಕಾರಿಯಾಗಿದೆ.



ಭಾರತ ಪುರಾತನ ನಾಗರಿಕತೆಯ ಉತ್ಪನನ ಭೂಮಿ, ಅದು 2020ರ ಹೊತ್ತಿಗೆ ಯುವಜನರ ದೇಶವಾಗಿ ಹೊರಹೊಮ್ಮಲಿದೆ. ಇದುವೇ ದೇಶದ ಆಸ್ತಿ. ಇದು ನುರಿತ ಕೌಶಲ ಮತ್ತು ಉತ್ತಮ ಸೇವೆಯಿಂದ ದೇಶ ಕಟ್ಟುವ ಕೆಲಸ ಮಾಡಬೇಕು ಇದಕ್ಕೆ ಈ ಸಂಸ್ಥೆ ನೆರವಾಗಬೇಕಾಗಿದೆ. ವ್ಯವಸ್ಥಿತವಾಗಿ ಜೀವನ ಕಲೆ ಅರಿಯುವುದು ಸಮಾಜದ ಮತ್ತು ದೇಶದ ಅತಿ ಅತಗ್ಯವಾಗಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಈ ಕೆಲಸದಲ್ಲಿ ನಿರತವಾಗಿರುವುದು ಶ್ಲಾಘನೀಯ.

ಗೌರವಾನ್ವಿತ ರಾಜ್ಯಪಾಲ ಶ್ರೀ ವಾಜುಬಾಯಿ ವಾಲಾ, ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯ, ಮಾನ್ಯ ಕೇಂದ್ರ ಸಚಿವರಾದ ಶ್ರೀ ಅನಂತ್‌ಕುಮಾರ್, ಮಾನ್ಯ ಲೋಕೋಪಯೋಗಿ ಸಚಿವರಾದ ಡಾ. ಎಚ್.ಸಿ. ಮಹದೇವಪ್ಪ, ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾದ ಶ್ರೀ ತನ್ವೀರ್ ಸೇಠ್, ರಾಜವಂಶಸ್ಥೆ, ಡಾ. ಪ್ರಮೋದಾದೇವಿ ಒಡೆಯರ್, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಸಂಸ್ಥೆಯ ಅಧ್ಯಕ್ಷರಾದ ಡಾ. ಅನಿಲ್‌ಕುಮಾರ್ ಜೈನ್, ಮುಖ್ಯ ರಾಷ್ಟ್ರೀಯ ಆಯುಕ್ತರಾದ ಶ್ರೀ ಬಿ.ಐ. ನಾಗರಾಳೆ, ಭಾ.ಆ.ಸೇ(ನಿ), ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಮತ್ತು ರಾಜ್ಯ ಮತ್ತು ರಾಷ್ಟ್ರೀಯ ಪದಾಧಿಕಾರಿಗಳು ಪಾಲ್ಗೊಂಡಿದ್ದರು.

**ಗೌರವಾನ್ವಿತ ರಾಜ್ಯಪಾಲರಾದ ಶ್ರೀ ವಾಜೂಬಾಯಿ ವಾಲ ಅವರ ಭಾಷಣದ ಮುಖ್ಯ ಅಂಶಗಳು**

"ದುಶ್ಚಟಗಳಿಂದ ದೂರ ಉಳಿದು ರಾಷ್ಟ್ರದ ಅಭ್ಯುದಯಕ್ಕೆ ಪಣತೊಡಿ. ಇಂದಿನ ಯುವಕರು ವ್ಯಸನದಿಂದ ಮುಕ್ತರಾಗಬೇಕು. ಅದು ಸ್ಪರ್ಶವಾಗದಂತೆ ಎಚ್ಚರ ವಹಿಸುವ ಮೂಲಕ ದುಶ್ಚಟಗಳಿಂದ ದೂರವಿರಬೇಕು. ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆಯಲ್ಲಿ ತೊಡಗಿಸಿಕೊಂಡರೆ ಇಂತಹ ಯಾವುದೇ ಚಟಗಳು ನಿಮ್ಮ ಹತ್ತಿರ ಸುಳಿಯುವುದಿಲ್ಲ. ಬದಲಾಗಿ ರಾಷ್ಟ್ರ ಪ್ರೇಮ, ಸಹಬಾಳ್ವೆ, ಸ್ನೇಹ, ಭಾವೈಕತೆಯತ್ತ ನಿಮ್ಮನ್ನು ಕೊಂಡೊಯ್ಯುತ್ತದೆ. ಸ್ವಾಮಿ ವಿವೇಕಾನಂದರು ಸಹ ಇದನ್ನೇ ಬೋಧಿಸಿದ್ದರು. ಕೆಟ್ಟದ್ದನ್ನು ಕೇಳಬೇಡ– ಕೆಟ್ಟದ್ದನ್ನು ಮಾತನಾಡಬೇಡ– ಕೆಟ್ಟದ್ದನ್ನು ನೋಡಬೇಡ ಎಂಬ ತತ್ವದಲ್ಲಿ ಮೌಲ್ಯಗಳೂ ಅಡಗಿವೆ. ಅದೇ ರೀತಿ ಈ ನಾಡಿನ ಯುವನಾಯಕರಾಗಿದ್ದ ಸುಭಾಷ್ ಚಂದ್ರಬೋಸ್, ಲಾಲಾ ಲಾಜಪತರಾಯ್ ಹಾಗೂ ಭಗತ್ ಸಿಂಗ್ ಸಹ ಯುವ ಪೀಳಿಗೆಯನ್ನು ಉತ್ತಮ ಮಾರ್ಗಕ್ಕೆ ಕೊಂಡ್ಯೊಯ್ದಿದ್ದರು. ಈ ಸಂದರ್ಭದಲ್ಲಿ ಇವರನ್ನೆಲ್ಲಾ ಸ್ಮರಿಸಬೇಕು". ಯುವ ಶಕ್ತಿಯನ್ನು ಸಮಾಜದ ಒಳಿತಿಗಾಗಿ ಹಾಗೂ ರಾಷ್ಟ್ರಪ್ರೇಮ ಮೂಡಿಸುವ ಕೆಲಸಕ್ಕೆ ತೊಡಗಿಸಿಕೊಂಡಲ್ಲಿ ಉತ್ತಮ ಸಮುದಾಯ ನಿರ್ಮಾಣವಾಗುವುದರಲ್ಲಿ ಸಂದೇಹವಿಲ್ಲ. ಸ್ಕೌಟ್ಸ್



ಮತ್ತು ಗೈಡ್ಸ್ ಮಕ್ಕಳೇ ಶಿಸ್ತು, ಸಂಯಮ, ಸಮಯ ಪಾಲನೆಯನ್ನು ಮೈಗೂಡಿಸಿಕೊಂಡಲ್ಲಿ ನಿಮ್ಮ ಭವಿಷ್ಯದ ಜೊತೆಗೆ ರಾಷ್ಟ್ರದ ಅಭಿವೃದ್ಧಿಯೂ ಆಗಲಿದೆ. ಆದ್ದರಿಂದ ಯುವ ಪಡೆ ವ್ಯಸನ ಮುಕ್ತರಾಗುವುದು ಅನಿವಾರ್ಯವಾಗಿದೆ ಎಂದು ಘನತೆವೆತ್ತ ರಾಜ್ಯಪಾಲರು ಈ ಸಂದರ್ಭ ತಮ್ಮ ನಿಶ್ಚಿತ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.



**ಮಾನ್ಯ ಮುಖ್ಯಮಂತ್ರಿಗಳ ಭಾಷಣದ ಮುಖ್ಯ ಅಂಶಗಳು**

ನಮ್ಮ ದೇಶಕ್ಕೆ ಕರ್ನಾಟಕದ ಸ್ಕೌಟ್ಸ್ ಮತ್ತು ಗೈಡ್ಸ್ ಅತಿ ಹೆಚ್ಚು ಕೊಡುಗೆ ನೀಡಿದೆ. 1907ರಲ್ಲಿ ಪ್ರಾರಂಭವಾದ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಕರ್ನಾಟಕವು ಹೆಚ್ಚು ಹೆಚ್ಚು ಚಟುವಟಿಕೆಯಿಂದ ಕೂಡಿದ ಕ್ರಿಯಾಶೀಲ ಚಳವಳಿಯಾಗಿದೆ. ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ ಎಂಬ ಘೋಷಣೆಯೊಂದಿಗೆ ಮೈಸೂರಿನಲ್ಲಿ 17ನೇ ರಾಷ್ಟ್ರೀಯ ಜಾಂಬೂರಿ ನಡೆಯುತ್ತಿರುವುದಕ್ಕೆ ಸಂತಸ ವ್ಯಕ್ತಪಡಿಸಿದರು.

ಉದ್ಘಾಟನಾ ಸಮಾರಂಭದಲ್ಲಿ ಸಾಂಸ್ಕೃತಿಕ ಪ್ರದರ್ಶನ ನಡೆಯಿತು. ಮೊದಲಿಗೆ ಕರ್ನಾಟಕದ ತಂಡ ಬಣ್ಣ ಬಣ್ಣದ ಉಡಿಗೆ ತೊಟ್ಟು "ಹಮ್ ಹೋಂಗೆ ಕಾಮಿಯಾಬ್" ಎಂಬ ಗೀತೆಗೆ ಹೆಜ್ಜೆ ಹಾಕುತ್ತಾ ನಾವು ಖಂಡಿತಾ ಗೆಲ್ಲುತ್ತೇವೆ ಎಂದು ಭರವಸೆಯನ್ನು ನೀಡಿದರು. ಬಳಿಕ ಎಲ್ಲಾ ರಾಜ್ಯಗಳ ಪ್ರತಿನಿಧಿ ತಂಡಗಳು ವಿವಿಧ ರೀತಿಯ ಉಡುಗೆಗಳನ್ನು ತೊಟ್ಟು ನೃತ್ಯವನ್ನು ಮಾಡಿದರು. ನಂತರ "ಮಾ ತುಝೆ ಸಲಾಂ" ಎಂಬ ಗೀತೆಗೆ ನೃತ್ಯ ಪ್ರದರ್ಶನ ನೀಡಿ ಮಾತೃಭೂಮಿಯನ್ನು ವಂದಿಸಿದರು. ವಿವಿಧತೆಯಲ್ಲಿ ಏಕತೆಯನ್ನು ಸಾರಿದರು. ಈ ಕಾರ್ಯಕ್ರಮಗಳು ಎಲ್ಲರ ಕಣ್ಮನ ತಣಿಯಿತು.

ಸಮಾರಂಭದ ಮುಕ್ತಾಯದಲ್ಲಿ ವಂದನಾರ್ಪಣೆಯನ್ನು ನೆರವೇರಿಸಿ ಕೊಟ್ಟ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಬೃಹತ್ ತಂಡಗಳೊಂದಿಗೆ ಕಾರ್ಯ ನಿರ್ವಹಿಸುತ್ತಾ ಜಾಂಬೂರಿಯ ಕನಸುಗಳನ್ನು ನನಸು ಮಾಡಲು ಶ್ರಮಿಸಿದ ಇವರ ಸಕ್ರಿಯ ನಾಯಕತ್ವಕ್ಕೆ ನಮ್ಮೆಲ್ಲರ ಅಭಿನಂದನಾಪೂರ್ವಕ ನಮನಗಳು.

ಈ ಸಮಾರಂಭದ ನಂತರ ಮಕ್ಕಳು ಅಲ್ಪವಿರಾಮ ಪಡೆದು ಪುನಃ ಪ್ರಾಂಗಣದಲ್ಲಿ ಸೇರಿದರು. ರೋಮಾಂಚಕಾರಿಯಾದ ಮೋಟಾರ್ ಬೈಕ್ ಸ್ಟಂಟ್ ಪ್ರದರ್ಶಿಸಲಾಯಿತು. ಮಕ್ಕಳು ಈ ಪ್ರದರ್ಶನ ಕಂಡು ರೋಮಾಂಚನದಿಂದ ಹರ್ಷನಾದ ಮಾಡುತ್ತಾ ಘೋಷಣೆಗಳನ್ನು ಕೂಗಿದರು.

ಡಿಸೆಂಬರ್ 29, 2017ರಂದು ನಡೆದ ಸ್ಥಳೀಯ ಪ್ರತಿಭಾ ಪ್ರದರ್ಶನದಲ್ಲಿ ಕರ್ನಾಟಕದ ರಾಜ್ಯದ ಪ್ರಸಿದ್ಧ ಕಲಾತಂಡಗಳು ಅತ್ಯುತ್ತಮ ಸ್ಥಳೀಯ ಕಲಾ ಪ್ರದರ್ಶನವನ್ನು ನೀಡಿದರು. ಡೊಳ್ಳು ಕುಣಿತ, ವೀರಗಾಸೆ, ಚಾಮನ ಕುಣಿತ, ನಂದಿಕೋಲು, ಯಕ್ಷಗಾನ, ಕಂಸಾಳೆ ಮುಂತಾದ ಜಾನಪದ ಕಲೆಯನ್ನು ಅಮೋಘ ಉಡಿಗೆಗಳೊಂದಿಗೆ ಪ್ರದರ್ಶಿಸಿದರು. ಜಾಂಬೂರಿಯ ಮೊದಲ ದಿನ ಮುಕ್ತಾಯವಾಯಿತು.

ಉದ್ಘಾಟನೆಯ ನಂತರ ಮುಂದಿನ ಕಾರ್ಯಕ್ರಮಗಳ ಸಂಕ್ಷಿಪ್ತ ವಿವರಣೆಯನ್ನು ಮುಂದಿನ ಸಂಚಿಕೆಯಲ್ಲಿ ನಿರೀಕ್ಷಿಸಿ.

**ಮುಂದುವರೆಯುವುದು . . .**

# ಜಿಲ್ಲಾ ವಾರ್ತೆಗಳು

## ಬೆಳಗಾವಿ

ಜನವರಿ 01 ರಿಂದ 25, 2017 ಹಾಗೂ ಜನವರಿ 01 ರಿಂದ 30, 2017ರ ವರೆಗೆ ಎರಡು ಹಂತದಲ್ಲಿ ಕರ್ನಾಟಕ ದರ್ಶನ ಪ್ರವಾಸವನ್ನು ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ ಜಿಲ್ಲಾ ಸಂಸ್ಥೆ ಬೆಳಗಾವಿ ಹಾಗೂ ಕರ್ನಾಟಕ ಪ್ರವಾಸೋದ್ಯಮ ಇಲಾಖೆಯ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಳ್ಳಲಾಗಿತ್ತು. ಕರ್ನಾಟಕ ದರ್ಶನ ಪ್ರವಾಸಕ್ಕೆ ಚಾಲನೆ ನೀಡಲು ಮೊದಲನೆ ಬಾರಿಗೆ ಬೆಳಗಾವಿ ಡಿ.ಡಿ.ಪಿ.ಐ. ಶ್ರೀ ಎಸ್.ವೈ. ಹಳಿಂಗಳಿ. ಡಯಟ್ ಪ್ರಾಂಶುಪಾಲರಾದ ಶ್ರೀ ಡಿ.ಎಂ. ದಾನೋಜಿ ಇವರು ಆಗಮಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ. ಹುಡೇದ ಹಾಗು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು. ಎರಡನೆ ಬಾರಿಗೆ ನಗರ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಶ್ರೀ ಬಿ.ಎಂ. ನಲತವಾಡ ಇವರು ಆಗಮಿಸಿದ್ದರು. ಸದರಿ ವೇಳೆಯಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಆಗಮಿಸಿದ್ದರು.

* ಜನವರಿ 26 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಇಲ್ಲಿ 68ನೇ ಗಣರಾಜ್ಯೋತ್ಸವ ದಿನಾಚರಣೆ ನಿಮಿತ್ತ ಧ್ವಜಾರೋಹಣವನ್ನು ನಡೆಸಲಾಯಿತು. ಧ್ವಜಾರೋಹಣವನ್ನು ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕುಂಟೋಜಿ ಇವರು ನೆರವೇರಿಸಿದರು. ಕಾರ್ಯಕ್ರಮದಲ್ಲಿ ಹತ್ತಿರದ ಶಾಲೆಯ 100 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್‌ಗಳು ಭಾಗವಹಿಸಿದ್ದರು.

ನಂತರ 9 ಗಂಟೆಗೆ ಜಿಲ್ಲಾ ಕ್ರೀಡಾಂಗಣದಲ್ಲಿ ಜಿಲ್ಲಾಡಳಿತದ ವತಿಯಿಂದ ಜರುಗಿದ ಸಾಮೂಹಿಕ ಪಥ ಸಂಚಲನದಲ್ಲಿ ವನಿತಾ ವಿದ್ಯಾಲಯ, ಮಹಿಳಾ ವಿದ್ಯಾಲಯ, ಚಂಪಾಬಾಯಿ ಚೋಗಲೆ ಶಾಲೆಯ ಸ್ಕೌಟ್-ಗೈಡ್‌ಗಳ ತಂಡಗಳು ಭಾಗವಹಿಸಿದ್ದರು. ಇವುಗಳಲ್ಲಿ ವನಿತಾ ವಿದ್ಯಾಲಯದ ಗೈಡ್ ತಂಡ ಪ್ರಥಮ ಸ್ಥಾನ ಹಾಗೂ ಚಂಪಾಬಾಯಿ ಚೋಗಲೆ ಶಾಲೆಯ ಗೈಡ್ಸ್ ತಂಡ ದ್ವಿತೀಯ ಸ್ಥಾನ ಪಡೆದರು. ನಂತರ 10.00 ಗಂಟೆಗೆ ನಡೆದ ಸಾಮೂಹಿಕ ನೃತ್ಯದಲ್ಲಿ ಸ್ಥಳೀಯ ಶಾಲೆಯ ಜೈನ್ ಹೆರಿಟೇಜ್, ಜ್ಞಾನ ಪ್ರಬೋಧಿನಿ ಮಂದಿರ, ಮುಕ್ತಾಂಗಣ ಶಾಲೆ ಹಾಗೂ ಜೋಶಿ ಸೆಂಟ್ರಲ್ ಪಬ್ಲಿಕ್ ಶಾಲೆಗಳಿಂದ ಒಟ್ಟು 250 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ಜನವರಿ 28 ರಂದು ಗೋಕಾಕದ ಸರಕಾರಿ ಪದವಿ ಪೂರ್ವ ಮಹಾ ವಿದ್ಯಾಲಯದಲ್ಲಿ ರೇಂಜರ್ ಘಟಕದ ರೇಂಜರ್‌ಗಳಿಗೆ ದೀಕ್ಷಾ ಸಮಾರಂಭ ಜರುಗಿತು. ಸಮಾರಂಭವು ಧ್ವಜಾರೋಹಣದೊಂದಿಗೆ ಪ್ರಾರಂಭವಾಯಿತು. ಅಧ್ಯಕ್ಷತೆಯನ್ನು ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಬಿ.ಎಂ. ಹಾದಿಮನಿಇವರು ವಹಿಸಿದ್ದರು. ಕಾಲೇಜಿನ ಉಪನ್ಯಾಸಕರು, ಗೈಡ್ ಕ್ಯಾಪ್ಟನ್ ಕು: ಲಕ್ಷ್ಮೀ ಎಸ್. ಮಂಗಿ, ಜಿಲ್ಲಾ ಸಂಘಟಕ, ಶ್ರೀ ಡಿ.ಬಿ. ಅತ್ತಾರ ಉಪಸ್ಥಿತರಿದ್ದರು.

* ಜನವರಿ 23 ರಿಂದ 25ರ ವರೆಗೆ ಬೆಳಗಾವಿ ಜಿಲ್ಲೆ ಬೈಲಹೊಂಗಲದಲ್ಲಿ ಜರುಗಿದ ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮೀಣಾಭಿವೃದ್ಧಿ ಯೋಜನೆಯ 37ನೇಯ ರಾಜ್ಯ ಮಟ್ಟದ ಕೃಷಿ ಮೇಳದಲ್ಲಿ ಕೆ.ಆರ್.ಸಿ.ಇ. ಸಂಸ್ಥೆಯ ಜಿ.ಜಿ. ದೇಸನೂರ ಕಲಾ ಬಿ.ಎಂ.ಪಿ. ವಾಣಿಜ್ಯ ಹಾಗೂ ಎಸ್.ವಿ.ಎಸ್ ವಿಜ್ಞಾನ ಮಹಾವಿದ್ಯಾಲಯದ ರೋವರ್‌ಗಳು ಸ್ವಯಂ ಸೇವಕರಾಗಿ ಕಾರ್ಯನಿರ್ವಹಿಸಿದರು.



# BENGALURU NORTH

The Shivajinagar Local Association Conducted Annual Rally on 28.01.2017 at R.T.C.C. Higher Primary School. St. Joseph's Convent, Fraser Town. 240 Scouts-Guides & Bulbuls participated. The following activities were conducted.

**Scouts/Guides:** Uniform & Smartness, Knots, Quiz, Knots, Patriotic Song, National Anthem, Flag & Prayer

**Cubs / Bulbuls:** Action Song, Prayer Song, National Anthem, Uniform & Smartness

Smt. S.K. Prabha Jt. State Secretary B.S.&G. Karnataka Inaugurated the Annual Rally. Sri T. S. Lucas Chairman, Rathnajali , President Sr. Sagaya Mary, Head Mistress of R.T.C. School, Sr. Jersy ADC & Smt. B. Revathy, LT(B) & ASC, (G) were present.

Mrs. Sagaya Mary. H.M. St. Anthony Boys' School and Carunya Badmaja, L.T.(G) and D.T.C. were felicitated on this occasion.





## ಬೆಂಗಳೂರು ದಕ್ಷಿಣ



ಅರೆಕೆರೆ ಎ.ಇ.ಸಿ.ಎಸ್. ಮ್ಯಾಗ್ನೋಲಿಯಾ ಮಾರುತಿ ಪಬ್ಲಿಕ್ ಶಾಲೆಯ ಪೋಷಕರ ವತಿಯಿಂದ ಆನೇಕಲ್ ಸರ್ಕಾರಿ ಶಾಲೆಗಳ ಸ್ಕೌಟ್-ಗೈಡ್‌ಗಳಿಗೆ 100 ಜೊತೆ ಉಚಿತ ಸ್ಕೌಟ್-ಗೈಡ್ ಸಮವಸ್ತ್ರ ವಿತರಿಸಲಾಯಿತು. ಸಮಾರಂಭದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ರಾಜ್ಯ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿರೆಡ್ಡಿ ಭಾಗವಹಿಸಿ ಸಮಾಜಸೇವೆಯಿಂದ ಮನಸ್ಸಿಗೆ ತೃಪ್ತಿ ಸಿಗುತ್ತದೆ ಎಂದು ನುಡಿದರು.

ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಮಾತನಾಡಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಮಕ್ಕಳ ಮಾನಸಿಕ, ಸಾಮಾಜಿಕ, ಆಧ್ಯಾತ್ಮಿಕ, ದೈಹಿಕ ಮತ್ತು ಭಾವನಾತ್ಮಕ ಬಾಂಧವ್ಯಗಳ ಅಭಿವೃದ್ಧಿಗೆ ಪೂರಕವಾಗಿದೆ ಎಂದು ನುಡಿದರು.

ಕ್ಷೇತ್ರ ಸಮನ್ವಯಾಧಿಕಾರಿ ಶ್ರೀ ಶಂಕರ್ ಮೂರ್ತಿ ಮಾತನಾಡಿ ಗಗನದಲ್ಲಿ ಇರುವ ಸಹಸ್ರಾರು ನಕ್ಷತ್ರಗಳ ಪೈಕಿ ದ್ರುವ ನಕ್ಷತ್ರ ವಿಶಿಷ್ಟತೆಯನ್ನು ಹೊಂದುವ ರೀತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಕೋಟ್ಯಂತರ ಮಕ್ಕಳ ಪೈಕಿ ಸ್ಕೌಟ್ಸ್-ಗೈಡ್ಸ್ ವಿಶಿಷ್ಟ ಆಕರ್ಷಣೆಯಾಗಿರುತ್ತಾರೆ ಎಂದು ನುಡಿದರು. ಸರ್ಕಾರಿ ನೌಕರರ ಸಂಘದ ಅಧ್ಯಕ್ಷ ಶ್ರೀ ವಿ.ಕೆ. ಗವಿರಂಗಯ್ಯ, ಎ.ಇ.ಸಿ.ಎಸ್. ಮ್ಯಾಗ್ನೋಲಿಯಾ ಮಾರುತಿ ಪಬ್ಲಿಕ್ ಶಾಲೆಯ ಪೋಷಕರಾದ ಶ್ರೀ ಪರಶುರಾಮ್ ಕುಲಕರ್ಣಿ, ಶ್ರೀ ಮಹೇಶ್ ಹೆಬ್ಬಾರ್, ಶ್ರೀಮತಿ ಶೈಲ ಮದ್ದಾಲಿ ಮಾತನಾಡಿದರು. ಸ್ಥಳೀಯ ಸಂಸ್ಥೆಯ ತಾಲ್ಲೂಕು ಖಜಾಂಚಿ ಶ್ರೀ ಸಿ. ಲಕ್ಷ್ಮೀಕಾಂತರಾಜು, ಜಂಟೀ ಕಾರ್ಯದರ್ಶಿ ಶ್ರೀಮತಿ ಆರ್. ಸುಮಾ, ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಉಪಾಧ್ಯಕ್ಷೆ ಶ್ರೀಮತಿ ಶಾಂತಮ್ಮ, ಶಿಕ್ಷಕರಾದ ಶ್ರೀ ಸಿ. ಮೋಹನ್ ಕುಮಾರ್, ಶ್ರೀ ರಾಜೇಶ್, ಶ್ರೀಮತಿ ಸಿರೀಶ, ಶ್ರೀಮತಿ ಸೌಮ್ಯ, ಶ್ರೀಮತಿ ಮಮತ ಮೊದಲಾದವರು ಉಪಸ್ಥಿತರಿದ್ದರು.

## ಚಿತ್ರದುರ್ಗ

ಜನವರಿ 17 ರಂದು ಹೊಳಲ್ಕೆರೆ ತಾ॥ ಅಡನೂರು ಗ್ರಾಮದ ನೇತಾಜಿ ಸುಭಾಷ್ ಚಂದ್ರ ಬೋಸ್ ಪ್ರೌಢಶಾಲೆಯಲ್ಲಿ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದಲ್ಲಿ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರು ಮತ್ತು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಪದಾಧಿಕಾರಿಗಳು, ಸ್ಕೌಟರ್ಸ್-ಗೈಡರ್ಸ್‌ಗಳು, 65 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಜನವರಿ 21 ರಂದು ಹೊಸದುರ್ಗ ತಾ॥ ಸೆಂಟ್ ಅಂತೋನಿ ಪ್ರೌಢ ಶಾಲೆಯಲ್ಲಿ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದಲ್ಲಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಲವಕುಮಾರ್, ಬಿ.ಆರ್.ಸಿ. ಶ್ರೀ ಮೌನೇಶ್, ದೈಹಿಕ ಶಿಕ್ಷಣ ಪರಿವೀಕ್ಷಕರು ಮತ್ತು ಶಾಲೆಯ ಮುಖ್ಯಸ್ಥರು ಪ್ರಾಂಶುಪಾಲರು, ಜಿಲ್ಲಾ ಸಂಸ್ಥೆಯಿಂದ ಡಿ.ಟಿ.ಸಿ. ಗೈಡ್, ಡಿ.ಒ., ಸ್ಕೌಟ್ಸ್-ಗೈಡ್ಸ್‌ಗಳು ಸ್ಕೌಟರ್ಸ್-ಗೈಡರ್ಸ್‌ಗಳು, 135 ಸ್ಕೌಟ್ಸ್-ಗೈಡ್ಸ್‌ಗಳು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಹಾಗೂ ಪದಾಧಿಕಾರಿಗಳು ಭಾಗವಹಿಸಿದ್ದರು.

* ಜನವರಿ 23 ರಂದು ಮೊಳಕಾಲ್ಮೂರು ನಗರದ ಸ.ಹಿ.ಪ್ರಾ. ಶಾಲೆಯಲ್ಲಿ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದಲ್ಲಿ ಸ್ಥಳೀಯ ಸಂಸ್ಥೆಯ ಖಜಾಂಚಿಯವರಾದ ಶ್ರೀ ಹನುಮಂತರಾಯಪ್ಪ, ಟಿ.ಪಿ.ಇ.ಒ. ಇವರು ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯಿಂದ ಶ್ರೀ ಗುರುಮೂರ್ತಿ ಡಿ.ಒ. ರವರು, ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, 50 ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

* ಜನವರಿ 24 ರಂದು ಚಳ್ಳಕೆರೆ ತಾ॥ನ ಆರ್.ಎಂ.ಎಸ್.ಎ. ಆದರ್ಶ ಶಾಲೆಯಲ್ಲಿ ಸುಮಾರು 270 ಸ್ಕೌಟ್ಸ್-ಗೈಡ್ಸ್ ಭಾಗವಹಿಸಿದ ದ್ವಿತೀಂಯ ಸೋಪಾನ ಪರೀಕ್ಷಾ ಶಿಬಿರದಲ್ಲಿ ಎಲ್.ಎ. ಖಜಾಂಚಿ ಯವರಾದ ಶ್ರೀ ಷಣ್ಮುಖಪ್ಪ, ಎಲ್.ಎ. ಕಾರ್ಯದರ್ಶಿ ಶ್ರೀ ಶ್ರೀನಿವಾಸಮೂರ್ತಿ, ಜಿಲ್ಲಾ ಸಂಸ್ಥೆಯಿಂದ ಸ್ಕೌಟ್ಸ್-ಗೈಡ್ಸ್, ಡಿ.ಒ. ಗಳು ಭಾಗವಹಿಸಿದ್ದರು.

* ಜನವರಿ 27 ರಿಂದ 29 ರ ವರೆಗೆ ಶ್ರೀ ಮುರುಘರಾಜೇಂದ್ರ ಬೃಹನ್ಮಠದಲ್ಲಿ ತೃತೀಯ ಸೋಪಾನ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರವನ್ನು ಶ್ರೀ ಎಂ. ರೇವಣಸಿದ್ದಪ್ಪ ಜಿಲ್ಲಾ ಮುಖ್ಯ ಆಯುಕ್ತರು ಹಾಗು ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಸಸಿಗೆ ನೀರು ಹಾಯಿಸುವುದರ ಮೂಲಕ ಉದ್ಘಾಟಿಸಿದರು. ಜಿಲ್ಲೆಯ 6 ತಾಲ್ಲೂಕುಗಳಿಂದ 405 ಸ್ಕೌಟ್ಸ್-ಗೈಡ್ಸ್‌ಗಳು ಹಾಗು 25 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ಸ್ಕೌಟ್ಸ್ ವಿಭಾಗದ ನಾಯಕತ್ವವನ್ನು ಶ್ರೀ ಸಿ.ಎನ್. ಮಹೇಶ್, ಎಲ್.ಟಿ.(ಸ್ಕೌಟ್ಸ್) ರವರು ಹಾಗೂ ಗೈಡ್ಸ್ ವಿಭಾಗದ ನಾಯಕತ್ವವನ್ನು ಶ್ರೀಮತಿ ಸಿ.ಪಿ. ಸುಶೀಲ, ಎ.ಎಲ್.ಟಿ. (ಗೈಡ್ಸ್) ರವರು ವಹಿಸಿದ್ದರು. ಜಿಲ್ಲಾ ಪದಾಧಿಕಾರಿಗಳು ಸ್ಕೌಟ್ಸ್-ಗೈಡ್ಸ್‌ಗಳಿಗೆ ಹಣ್ಣು, ಸಿಹಿ ಬಿಸ್ಕತ್ತು ಮುಂತಾದವುಗಳನ್ನು ವಿತರಿಸಿದರು.

## ಚಾಮರಾಜನಗರ

ಫೆಬ್ರವರಿ 03 ರಂದು ಶ್ರೀ ಪತಂಜಲಿ ಯೋಗ ಶಿಕ್ಷಣ ಸಮಿತಿ (ರಿ) ಹಾಗೂ ಸೇವಾಭಾರತಿ ಟ್ರಸ್ಟ್ (ರಿ) ಚಾಮರಾಜನಗರ ಇವರ ಸಂಯುಕ್ತ ಆಶ್ರಯದಲ್ಲಿ ರಥಸಪ್ತಮಿ ಅಂಗವಾಗಿ 7ನೇ ವಾರ್ಷಿಕ ಸಾಮೂಹಿಕ 108 ಸೂರ್ಯ ನಮಸ್ಕಾರವನ್ನು ಚಾಮರಾಜನಗರದಲ್ಲಿ ಹಮ್ಮಿಕೊಳ್ಳಲಾಯಿತು.



ಇದೇ ಸಂದರ್ಭದಲ್ಲಿ ಸೆಂಟ್ ಜೋಸೆಫ್ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಹಾಗೂ ಜಿಲ್ಲಾ ಸಂಘಟಕಿ ಕು. ಕಮಲಮ್ಮ (ಗೈ) ಜಿಲ್ಲಾ ಸಂಘಟಕ ಶ್ರೀ ಎನ್. ಅಶೋಕ್ ಕುಮಾರ್ (ಸ್ಕೌ) ಭಾಗವಹಿಸಿದ್ದರು.

## ದಕ್ಷಿಣ ಕನ್ನಡ

ಜನವರಿ 13 ರಿಂದ 15 ರ ವರೆಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಬೆಳ್ತಂಗಡಿ, ಕ್ಷೇತ್ರ ಸಂಪನ್ಮೂಲ ಕೇಂದ್ರ, ಬೆಳ್ತಂಗಡಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಮಡಂತ್ಯಾರು, ಮೊರಾರ್ಜಿ ದೇಸಾಯಿ ವಸತಿ ಶಾಲೆ ಮಚ್ಚಿನ, ಇವುಗಳ ಜಂಟಿ ಆಶ್ರಯದಲ್ಲಿ ಮೊರಾರ್ಜಿ ದೇಸಾಯಿ ವಸತಿಶಾಲೆ ಮಚ್ಚಿನದಲ್ಲಿ, ಮಡಂತ್ಯಾರು, ಸ್ಥಳೀಯ ಸಂಸ್ಥೆಯ ರೋವರ್ಸ್-ರೇಂಜರ್ಸ್ ಸಮಾಗಮ, ಸ್ಕೌಟ್ಸ್-ಗೈಡ್ಸ್ ಮೇಳ ಮತ್ತು ಕಬ್ಸ್-ಬುಲ್‌ಬುಲ್ಸ್ ಉತ್ಸವವನ್ನು ಜರುಗಿಸಲಾಯಿತು. ಜಿಲ್ಲಾ ಪಂಚಾಯತ್ ಸದಸ್ಯೆ ಶ್ರೀಮತಿ ಮಮತಾ ಎಂ. ಶೆಟ್ಟಿಯವರು ಮೇಳವನ್ನು ಉದ್ಘಾಟಿಸಿದರು. ಸಮಾರಂಭದ ಅಧ್ಯಕ್ಷರು ಹಾಗೂ ಸಂಸ್ಥೆಯ ಅಧ್ಯಕ್ಷರಾದ ಹಾಜಿ॥ ಅಬ್ದುಲ್ ಲತೀಫ್ ಸಾಹೇಬರು ಭಾಗವಹಿಸಿದ್ದು ಎಲ್ಲಾ ಮಕ್ಕಳಿಗೆ ನೆನಪಿನ ಕಾಣಿಕೆ ನೀಡಿದರು,

* ಜನವರಿ 05 ರಂದು 2016-17ನೇ ಸಾಲಿನ ರ್‍ಯಾಲಿಯ ದ.ಕ.ಜಿ.ಪ.ಉ.ಹಿ.ಪ್ರಾ. ಶಾಲೆ, ಹೂ ಹಾಕುವ ಕಲ್ಲು ಇಲ್ಲಿ ನಡೆಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಹಾಗೂ ದ.ಕ. ಜಿಲ್ಲಾ ಪಂಚಾಯತ್ ಮಾಜಿ ಸದಸ್ಯರಾದ ಶ್ರೀ ಸಂತೋಷ್ ಕುಮಾರ್ ರೈ ಬೋಳಿಯಾರು ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಬಂಟ್ವಾಳ ತಾಲೂಕು ಪಂಚಾಯತ್ ಅಧ್ಯಕ್ಷರಾದ ಶ್ರೀ ಚಂದ್ರಹಾಸ ಕರ್ಕೇರಾ, ಬಾಳೆಪುಣಿ ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ಲೀಲಾವತಿ, ತಾಲೂಕು ಪಂಚಾಯತ್ ಸದಸ್ಯರಾದ ಶ್ರೀ ನವೀನ್ ಪಾದಲ್ಪಾಡಿ, ಶಿಕ್ಷಣ ಇಲಾಖೆಯ ಬಿ.ಆರ್.ಪಿ. ಶ್ರೀಮತಿ ರವಿಕಲಾ, ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಸಂಸ್ಥೆಯ ಖಜಾಂಚಿ ಶ್ರೀ ವಾಸುದೇವ ಬೋಳೂರು, ಮುಡಿಪು ರ್‍ಯಾಲಿಗೆ ಧನ ಸಹಾಯ ಕೊಟ್ಟಂತಹ ದಾನಿಗಳು ಉಪಸ್ಥಿತರಿದ್ದರು. ಈ ರ್‍ಯಾಲಿಯಲ್ಲಿ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್, ಶಿಕ್ಷಕರು ಹಾಗೂ ಸ್ವಯಂಸೇವಕರು ಒಟ್ಟು 445 ಮಂದಿ ಭಾಗವಹಿಸಿದ್ದರು.

* ಜನವರಿ 25 ರಂದು ಶಾರದಾ ವಿದ್ಯಾಲಯ ಕೊಡಿಯಾಲ್‌ಬೈಲ್, ಮಂಗಳೂರು ಇವರ ಪ್ರಾಯೋಜಕತ್ವದಲ್ಲಿ ಸುಭಾಷ್ ಚಂದ್ರ ಬೋಸ್ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ದೀಪ ಪ್ರಜ್ವಲನ ಮಾಡಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದ ಎಸ್.ಡಿ.ಎಂ. ಕಾನೂನು ಕಾಲೇಜಿನ ವಿದ್ಯಾರ್ಥಿ ಹಾಗೂ ಪ್ರಭಾಷಣಕಾರರಾದ ಶ್ರೀ ವಿಕ್ರಮ್‌ರಾಜ್ ಇವರು ಸುಭಾಷ್ ಚಂದ್ರರ ಜೀವನ ಮತ್ತು ಸಾಧನೆ, ಪ್ರಸ್ತುತ ಅವರ ಧ್ಯೇಯಗಳ ಪ್ರಸ್ತುತತೆಯನ್ನು ತಿಳಿಸಿದರು. ಇನ್ನೋರ್ವ ಅತಿಥಿಯಾಗಿ ಡಿ.ಒ.ಸಿ., ಗೈಡ್ ಶ್ರೀಮತಿ ಚಂದ್ರಕಲಾ ಇವರು ಭಾಗವಹಿಸಿದರು. ವೇದಿಕೆಯಲ್ಲಿ ವಿದ್ಯಾಲಯದ ಪ್ರಾಂಶುಪಾಲರಾದ ಶ್ರೀಮತಿ ಸುನೀತಾ ವಿ. ಮಡಿ ಉಪಸ್ಥಿತರಿದ್ದರು. ಸ್ಕೌಟ್ಸ್ ಮಾಸ್ಟರ್ ಶ್ರೀ ದಿನೇಶ್ ಕಾರ್ಯಕ್ರಮ ಸಂಘಟಿಸಿದರು. ಸ್ಕೌಟ್ ವಿದ್ಯಾರ್ಥಿ ಅತುಲ್ ಸ್ವಾಗತಿಸಿದರು. ವರುಣ್ ಧನ್ಯವಾದವಿತ್ತರು. ಗೈಡ್ ವಿದ್ಯಾರ್ಥಿ ಶಾರ್ವರಿ ಮಯ್ಯ ಕಾರ್ಯಕ್ರಮ ನಿರೂಪಿಸಿದರು.

* ಜನವರಿ 04 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಭವನ, ಮಂಗಳೂರು ಇಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್-ಗೈಡರ್ ಸಮಾವೇಶ ನಡೆಯಿತು. ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಸಮಾವೇಶದ ಅಧ್ಯಕ್ಷತೆ ವಹಿಸಿ, ಮಾತನಾಡಿದರು. ಮುಂದಿನ ವರ್ಷದಲ್ಲಿ ರಾಜ್ಯದಲ್ಲಿ 10000 ಮಕ್ಕಳಿಗೆ ಭಾರತ ದರ್ಶನಕ್ಕೆ ಅವಕಾಶ ನೀಡುವುದಾಗಿ ತಿಳಿಸಿದರು. ಜಾನಪದ ವಿದ್ವಾಂಸ, ವಿಶ್ರಾಂತ ಕುಲಪತಿ ಪ್ರೊ. ಡಾ.ಬಿ.ಎ. ವಿವೇಕ್ ರೈ ರವರು ಸಮಾವೇಶವನ್ನು ಉದ್ಘಾಟಿಸಿ, ತಮ್ಮ ದಿಕ್ಸೂಚಿ ಭಾಷಣದಲ್ಲಿ ಸಮಾಜಸೇವೆ ಸ್ಕೌಟ್ಸ್-ಗೈಡ್ಸ್ ಸಂಘಟನೆಯಲ್ಲಿ ಮಾದರಿಯಾಗಿ ಬೆಳೆಯಲು ಜೀವನ ಮೌಲ್ಯವನ್ನು ರೂಢಿಸಿಕೊಂಡು ಸಾಮಾಜಿಕ ಪಿಡುಗು. ಸ್ವಚ್ಛತೆ, ಮಾದಕ ದುಶ್ಚಟಗಳ ಬಗ್ಗೆ ಜಾಗೃತಿ ಮೂಡಿಸುವ ಕೆಲಸ ಕ್ರಾಂತಿಕಾರಿಯಾಗಿ ಮಾಡಬೇಕು ಎಂದರು. ಮುಖ್ಯ ಅತಿಥಿಯ ನೆಲೆಯಲ್ಲಿ ಕರ್ನಾಟಕ ಬ್ಯಾಂಕ್ ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಶ್ರೀನಿವಾಸ ದೇಶಪಾಂಡೆಯವರು ಮಾತನಾಡಿ, ಜಾತ್ಯತೀತತೆ ನಮ್ಮಲ್ಲಿ ಜಾಗೃತಿಯಾದಾಗ ಎಲ್ಲರಲ್ಲೂ ಮಾನವೀಯ ಮೌಲ್ಯ ಕಾಣಲು ಸಾಧ್ಯ ಎಂದರು. ಕರ್ನಾಟಕ ಬ್ಯಾಂಕಿನ ವತಿಯಿಂದ ಗಿಡ ನೆಡುವ ಸಲುವಾಗಿ ನೀಡಿದ ರೂ. 2,00,000/- ಅನುದಾದ ಬಗ್ಗೆ ಸ್ಕೌಟ್ ಭವನದಲ್ಲಿ ಸಾಂಕೇತಿಕವಾಗಿ ಗಿಡಗಳನ್ನು ನೆಟ್ಟ ಬಳಿಕ ಪಿಲಿಕುಳ ತರಬೇತಿ ಕೇಂದ್ರಕ್ಕೆ ಹಾಗೂ ಸ್ಕೌಟ್ ಭವನದ ಕಾರ್ಯಾಲಯಕ್ಕೆ ಮಕ್ಕಳಿಗಾಗಿ ಕುಡಿಯುವ ನೀರಿನ



ವಾಟರ್ ಕೂಲರ್‌ರನ್ನು ಉದ್ಘಾಟನೆ ಮಾಡಿ ಹಸ್ತಾಂತರಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ರವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಕಾರ್ಯಕ್ರಮದಲ್ಲಿ 8 ಸ್ಕೌಟರ್ಸ್-ಮತ್ತು ಗೈಡರ್ಸ್‌ಗಳನ್ನು ಸನ್ಮಾನಿಸಲಾಯಿತು. ದೀರ್ಘಾವಧಿ ಸೇವೆಯನ್ನು ಮಾಡಿದ 35 ಸ್ಕೌಟ್ ಶಿಕ್ಷಕರನ್ನು 40 ಗೈಡ್ಸ್ ಶಿಕ್ಷಕಿಯರನ್ನು ಪ್ರಶಸ್ತಿ ಪತ್ರ ನೀಡಿ ಗೌರವಿಸಲಾಯಿತು. ದ.ಕ. ಜಿಲ್ಲೆಯಲ್ಲಿ ಪ್ರಪ್ರಥಮ ಬಾರಿಗೆ ಗೈಡ್ ವಿಭಾಗದಲ್ಲಿ ಲೀಡರ್ ಟ್ರೈನರ್ ಆಗಿ ಶ್ರೀಮತಿ ಜಯಶ್ರೀ ಅವರಿಗೆ ಡಿ.ಟಿ.ಸಿ. ಶ್ರೀಮತಿ ಸುನೀತಾರವರು ಪ್ರತಿಜ್ಞೆಯನ್ನು ಪುನರ್ ನವೀಕರಿಸಿ, ಎಲ್.ಟಿ.ಪಿನ್. ನೀಡಿದರು. ರಾಜ್ಯ ಮುಖ್ಯ ಆಯುಕ್ತರು ಪ್ರಶಸ್ತಿ ಪತ್ರಗಳನ್ನು ನೀಡಿ ಗೌರಿವಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀ ಎಂ.ಜಿ. ಕಜೆ ಎ.ಎಲ್.ಟಿ.(ಸ್ಕೌ) ಜಿಲ್ಲಾ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರೂಪಿಸಿದರು. ಜಿಲ್ಲಾ ಸಂಘಟನಾ ಆಯುಕ್ತೆ ಶ್ರೀಮತಿ ಚಂದ್ರಕಲಾ ಎಸ್. ಮತ್ತು ಜಿಲ್ಲಾ ಸಂಘಟಕ ಶ್ರೀ ಭರತ್ ಕಾರ್ಯಕ್ರಮವನ್ನು ಸಂಘಟಿಸಿದರು. ಜಿಲ್ಲೆಯ ವಿವಿಧ ಶಾಲೆಗಳಿಂದ 325ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್ ಶಿಕ್ಷಕರು ಭಾಗವಹಿಸಿದ್ದರು.

* ಜನವರಿ 05 ರಂದು ಕಬ್ಸ್‌ಗಳಿಗೆ ತೃತೀಯ ಚರಣ, ಬುಲ್‌ಬುಲ್ಸ್‌ಗಳಿಗೆ ಸುವರ್ಣಗರಿ, ಸ್ಕೌಟ್ಸ್-ಗೈಡ್ಸ್‌ಗಳಿಗೆ ತೃತೀಯ ಸೋಪಾನ, ರೋವರ್ಸ್-ರೇಂಜರ್ಸ್‌ಗಳಿಗೆ ನಿಪುಣ್ ಪ್ರಶಸ್ತಿ ಪತ್ರ ಪ್ರದಾನ ಸಮಾರಂಭವನ್ನು ಪುರಭವನ ಮಂಗಳೂರಿನಲ್ಲಿ ಸಂಘಟಿಸಲಾಯಿತು. ಕಾರ್ಯಕ್ರಮದಲ್ಲಿ ದ.ಕ. ಜಿಲ್ಲಾಧಿಕಾರಿ ಡಾ. ಕೆ.ಜಿ. ಜಗದೀಶ್, ಐ.ಎ.ಎಸ್. ರವರು ಪ್ರಶಸ್ತಿಗಳನ್ನು ವಿತರಿಸಿ ಮಾತನಾಡಿ, ಪಾಶ್ಚಾತ್ಯ ದೇಶಗಳು ನಮಗಿಂತ ಮುಂದುವರಿದಿದೆ. ನಮ್ಮಲ್ಲಿ ನೈಸರ್ಗಿಕ ಸಂಪತ್ತು ಹೇರಳವಾಗಿದ್ದರೂ ಶಿಸ್ತು ಹಾಗೂ ನೈರ್ಮಲ್ಯದ ಕೊರತೆಯಿದ್ದು, ಅದನ್ನು ಬೆಳೆಸಿಕೊಳ್ಳಬೇಕಾಗಿದೆ ಎಂದರು. ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಶಿಸ್ತು, ಸ್ವಚ್ಛತೆ ಪರಿಪಾಲನೆ ನಮ್ಮ ಆದ್ಯ ಕರ್ತವ್ಯವಾಗಿರಬೇಕಲ್ಲದೆ, ಮನಸ್ಸನ್ನೂ ಸ್ವಚ್ಛವಾಗಿರಿಸಿಕೊಳ್ಳಬೇಕು. 2017-18ನೇ ಸಾಲಿನ ರಾಜ್ಯ ಜಾಂಬೋರೇಟನ್ನು ಜಿಲ್ಲೆಯಲ್ಲಿ ನಡೆಸಲು ನಿರ್ಧರಿಸಲಾಗಿದೆ. ರಾಷ್ಟ್ರಮಟ್ಟದ ತರಬೇತಿ ಕೇಂದ್ರವನ್ನು ಸ್ಥಾಪನೆ ಮಾಡಲು ಉದ್ದೇಶಿಸಲಾಗಿದೆ ಎಂದು ನುಡಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಗದಗ

ದಿನಾಂಕ 14-02-2017 ರಿಂದ 18-02-2017 ರವರೆಗೆ ಪ್ರಕೃತಿ ಅಧ್ಯಯನ ಹಾಗೂ ಚಾರಣ ಶಿಬಿರ, ನಂದಿವೇರಿ ಮಠ ಕಪ್ಪತ್ತಗುಡ್ಡದಲ್ಲಿ, ರಾಜ್ಯ ಸಂಸ್ಥೆ ಹಾಗೂ ಗದಗ ಜಿಲ್ಲಾ ಸಂಸ್ತೆಯ ಆಶ್ರಯದಲ್ಲಿ ನಡೆಯಿತು. ಶಿಬಿರದ ರೋವರ್ ನಾಯಕರಾಗಿ ಶ್ರೀ ರಾಜೇಶ್ ಅವಲಕ್ಕಿ, ರೇಂಜರ್ ನಾಯಕಿಯಾಗಿ ಶ್ರೀಮತಿ ಶಕುಂತಲಾ ಭಾಗವಹಿಸಿದ್ದರು. ಕರ್ನಾಟಕದ 24 ಜಿಲ್ಲೆಗಳಿಂದ 143 ರೋವರ್ಸ್, 109 ರೇಂಜರ್ಸ್ ಭಾಗವಹಿಸಿದ್ದರು. ಪ್ರಕೃತಿ ಅಧ್ಯಯನದ ಅಂಗವಾಗಿ ಗುಡ್ಡವನ್ನು ಹತ್ತಿ ಇಳಿಯಲಾಯಿತು ಹಾಗೂ ಪ್ರಕೃತಿಯ ಬಗ್ಗೆ ಅರಿವು ಮೂಡಿಸಲಾಯಿತು. ತರಬೇತಿಯಲ್ಲಿ ಅರಣ್ಯಾಧಿಕಾರಿಗಳು ಕಪ್ಪತ್ತಗುಡ್ಡದ ಬಗ್ಗೆ ವಿಸ್ತಾರವಾಗಿ ತಿಳಿಸಿದರು. ನಂದಿವೇರಿ ಮಠದ ಸ್ವಾಮೀಜಿರವರುಅಲ್ಲಿಯ ಗಿಡಮೂಲಿಕೆಗಳು ಹುಟ್ಟಿಬಂದ ರೀತಿ ತಿಳಿಸಿದರು. ಸಮಾರೋಪ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ರವರು ಮಾತನಾಡುತ್ತಾ ಈ ಶಿಬಿರ ಮಾಡುವುದರಿಂದ ರೋವರ್ಸ್-ರೇಂಜರ್ಸ್‌ಗಳು ಉತ್ಸಾಹಭರಿತರಾಗುತ್ತಾರೆ ಹಾಗೂ ಪ್ರತಿವರ್ಷ ನಾವು ಈ ಶಿಬಿರ ನಡೆಸುತ್ತೇವೆ ಎಂದು ತಿಳಿಸಿದರು. ಶ್ರೀ ಪ್ರಭಾಕರ ಭಟ್ ಎಸ್.ಓ.ಸಿ.(ಎಸ್.) ಹಾಗು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ಡಂಬಳ, ಡೋಣಿ ಗ್ರಾಮ ಪಂಚಾಯತ ಅಧ್ಯಕ್ಷರು, ಸದಸ್ಯರು ಭಾಗವಹಿಸಿದ್ದರು.



## ಹಾವೇರಿ

ಫೆಬ್ರವರಿ 3 ರಿಂದ 04ರ ವರೆಗೆ ಹಾನಗಲ್ ತಾಲೂಕ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳ ಮೇಳವನ್ನು ನವೀನ ಹಿರಿಯ ಪ್ರಾಥಮಿಕ ಶಾಲೆ ಹಾನಗಲ್ ನಲ್ಲಿ ನಡೆಸಲಾಯಿತು. ಫೆಬ್ರವರಿ 03 ರಂದು ಶ್ರೀಮತಿ ಶಕುಂತಲಾ ಚೌಗಲಾ, ತಹಶೀಲ್ದಾರರು, ಹಾಗೂ ಅಧ್ಯಕ್ಷರು ತಾಲ್ಲೂಕ ಸಂಸ್ಥೆ ಹಾನಗಲ್ ರವರು ಮೇಳದ ಧ್ವಜವನ್ನು ಅರಳಿಸಿದರು. ಮೇಳದ ಉದ್ಘಾಟನೆಯನ್ನು ಶ್ರೀ ಮನೋಹರ, ಹ. ತಹಶೀಲ್ದಾರ್, ಮಾಜಿ ಸಚಿವರು ಹಾಗು ಶಾಸಕರು, ಹಾನಗಲ್ ರವರು ನೆರವೇರಿಸಿದರು. ಪ್ರತಿಯೊಂದು ಹಳ್ಳಿಯ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ಘಟಕಗಳು ಇರಬೇಕು. ಮಕ್ಕಳಲ್ಲಿ ದೇಶಾಭಿಮಾನ ಬರಬೇಕಾದರೆ ಸ್ಕೌಟ್ಸ್-ಗೈಡ್ಸ್ ಆಗಬೇಕೆಂದು ತಿಳಿಸಿದರು. ಸಾನ್ನಿಧ್ಯ ಪರಮ ಪೂಜ್ಯ ಸ್ವಾಮಿ ಚಿದ್ರೂಪಾನಂದ ಸರಸ್ವತಿ ಜಿ. ಶಾಖಾಮಠ ಮಲಗುಂದ ರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಪ್ರಭು ಸುಣಗಾರ. ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಎ.ಡಿ.ಸಿ. ಹಾನಗಲ್ ರವರು ಭಾಗವಹಿಸಿದ್ದರು. ಸಾಯಂಕಾಲ ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀಮತಿ ಯಲ್ಲವ್ವ ಕಂಚಿಗೊಲ್ಲರ, ಅಧ್ಯಕ್ಷರು ಪುರಸಭೆ ಹಾನಗಲ್ ಉದ್ಘಾಟನೆ ಮಾಡಿದರು. ಅತಿಥಿಗಳಾಗಿ ಶ್ರೀಮತಿ ಮಾಧುರಿ ದೇವಧರ ಜಿಲ್ಲಾ ಮುಖ್ಯ ಆಯುಕ್ತರು ಭಾಗವಹಿಸಿದ್ದರು. ಫೆಬ್ರವರಿ 04 ರಂದು ಮುಕ್ತಾಯ ಸಮಾರಂಭದ ಸಾನ್ನಿಧ್ಯವನ್ನು ಶ್ರೀ ಮ.ನಿಪ್ರ. ಶಿವಬಸವ ಮಹಾಸ್ವಾಮಿಗಳು. ಚನ್ನವೀರೇಶ್ವರ ವಿರಕ್ತಮಠ. ಅಕ್ಕಿ ಆಲೂರ. ರವರು ವಹಿಸಿದ್ದರು.



ಅತಿಥಿಗಳಾಗಿ ಶ್ರೀ ಕಲ್ಯಾಣಕುಮಾರ. ಶೆಟ್ಟರ. ಸದಸ್ಯರು ಪುರಸಭೆ. ಹಾನಗಲ್ಲ. ಶ್ರೀ ಆರ್. ಆರ್. ಕಾಶಪ್ಪನವರ. ಜಿಲ್ಲಾ ಕಾರ್ಯದರ್ಶಿ ಶ್ರೀ ಪ್ರಸನ್ನಕುಮಾರ ದಾನಿ, ಆಡಳಿತಾಧಿಕಾರಿಗಳು. ನವಿನ. ಪ್ರಾ.ಶಾಲೆ. ಶ್ರೀ ಎಮ್. ಎಸ್. ಪುರದ. ಪ್ರಧಾನ ಗುರುಗಳು. ನವೀನ ಪ್ರಾಥಮಿಕ ಶಾಲೆ ಭಾಗವಹಿಸಿದ್ದರು.

ಈ ಮೇಳದಲ್ಲಿ 280 ಸ್ಕೌಟ್ಸ್, 250 ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀ ಎಮ್.ಆರ್. ಪಾಟೀಲ ಡಿ.ಟಿ.ಸಿ. ಶ್ರೀಮತಿ ಶೋಭಾ ಪಾಟೀಲ ತಾಲೂಕ ಕಾರ್ಯದರ್ಶಿಗಳು ಶ್ರೀ ಎ.ಎಲ್. ಶೇಖಸೂರಣಗಿ. ಡಿಓ.ಸಿ. ಮೇಳದ ನಾಯಕರು ವಹಿಸಿದ್ದರು.

## ಮೈಸೂರು

ಜನವರಿ 01 ರಂದು ಮೈಸೂರಿನಲ್ಲಿ ನಿಧನ ಹೊಂದಿದ ಶ್ರೀ ಕೆ. ಜಗದೀಶ್, ಹಿರಿಯ ಉಪನ್ಯಾಸಕರು ಸಿ.ಟಿ.ಇ, ಮೈಸೂರು ಮತ್ತು ಸಹಾಯಕ ಜಿಲ್ಲಾ ಆಯುಕ್ತರು ಮೈಸೂರು ಜಿಲ್ಲೆ ಇವರ ಕುಟುಂಬದವರನ್ನು ಶ್ರೀ ಪಿ.ಜಿ.ಆರ್.ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಗಂಗಪ್ಪಗೌಡ, ಸಹಾಯಕ ರಾಜ್ಯ ಆಯುಕ್ತರು (ಸ್ಕೌಟ್ಸ್), ಶ್ರೀ ರಾಮಪ್ರಸಾದ್, ಜಿಲ್ಲಾ ಸಂಘಟಕರು, ಮೈಸೂರು ಇವರುಗಳು ಭೇಟಿಮಾಡಿ ಸಾಂತ್ವಾನ ಹೇಳಿದರು.

## ಕಾರವಾರ (ಹೊನ್ನಾವರ)



ಫೆಬ್ರವರಿ 18 ರಂದು ಬೆಳಗ್ಗೆ 10.00 ಗಂಟೆಗೆ ಹೊನ್ನಾವರ ಪ್ರತಿಭೋದಯ ಕಲಾ ಮಂದಿರಲ್ಲಿ ವಿ.ಪಿ.ದೀನದಯಾಳು ನಾಯ್ಡುರವರ ಜನ್ಮಶತಮಾನೋತ್ಸವ ಹಾಗೂ ಜಿಲ್ಲಾ ಮಟ್ಟದ ರ್‍ಯಾಲಿ ನಡೆಯಿತು. ಈ ಕಾರ್ಯಕ್ರಮವನ್ನು ಭಟ್ಕಳ ವಿಧಾನಸಭಾ ಕ್ಷೇತ್ರದ ಮಾನ್ಯ ಶಾಸಕರಾದ ಶ್ರೀ ಮಂಕಾಳು ಎಸ್. ವೈದ್ಯರವರು, ಜ್ಯೋತಿ ಬೆಳಗಿಸುವ ಮೂಲಕ ಉದ್ಘಾಟಿಸಿದರು.

ಮಾನ್ಯ ಶಾಸಕರು ಮಾತನಾಡುತ್ತ ಮಕ್ಕಳುವಿದ್ಯಾವಂತರೂ ಮತ್ತು ಜ್ಞಾನವಂತರಾಗಬೇಕೆಂದೂ, ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್ ಶಿಸ್ತು ಇತರ ವಿದ್ಯಾರ್ಥಿಗಳಿಗೆ ಮಾದರಿಯಾಗಲಿ' ಎಂದು ಆಶಿಸಿದರು. ತಮ್ಮ ಕ್ಷೇತ್ರದಲ್ಲಿ ನಡೆಯುತ್ತಿರುವ ಈ ಜಿಲ್ಲಾ ಮಟ್ಟದ ಕಾರ್ಯಕ್ರಮ. ಜೀವನ ಪ್ರೀತಿಯನ್ನು ಕಲಿಸಿದೆ, ಒಂದೇ ಕುಟುಂಬದಂತೆ ಬಾಳಲು ಮಕ್ಕಳಿಗೆ ತರಬೇತಿ ಕೊಡುತ್ತಿದೆ. ಮುಂದಿನ ಪೀಳಿಗೆಗೆ ಇಂತಹ ಶಿಕ್ಷಣ ಅಗತ್ಯವಾಗಿದೆ. ಆದ್ದರಿಂದ ಸ್ಕೌಟ್ ಚಳುವಳಿಯನ್ನು ನಾನು ಬೆಂಬಲಿಸುತ್ತೇನೆ ಎಂದು ಹೇಳಿದರು.

ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಮಾತನಾಡುತ್ತ ವಿದ್ಯಾರ್ಥಿಗಳು ರಾಷ್ಟ್ರಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕಿದ್ದು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ದೇಶದ ಆಸ್ತಿಯಾಗಿ ರೂಪುಗೊಳ್ಳಬೇಕು' ಹಾಗು ಕಾಡು, ಕಡಲು, ನದಿ, ಗುಡ್ಡ ಬೆಟ್ಟಗಳಿಂದ ಸಮೃದ್ಧವಾದ ಕರಾವಳಿ ಪರಿಸರವನ್ನು ಉಳಿಸಿಕೊಳ್ಳಬೇಕು ಎಂದು ತಿಳಿಸಿದರು. ಕು. ಮಾನಸ್ವಿ ವರ್ದಮಾನ್ ಜೈನ್, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹಳದಿಪುರ ದಿ॥ ವಿ.ಪಿ. ದೀನದಯಾಳು ನಾಯ್ಡು ಅವರನ್ನು ಕುರಿತು ಮಾತನಾಡಿದರು.



ಈ ಕಾರ್ಯಕ್ರಮದಲ್ಲಿ ಶ್ರೀ ಎಂ.ಎ.ಚೆಲ್ಲಯ್ಯ, ಸಾರ್ವಜನಿಕ ಸಂಪರ್ಕ ಅಧಿಕಾರಿ, ಬೆಂಗಳೂರು, ಶ್ರೀ ಅಣ್ಣಯ್ಯ ನಾಯ್ಕ, ಅಧ್ಯಕ್ಷರು, ತಾಲೂಕು ಪಂಚಾಯತ, ಹೊನ್ನಾವರ, ಶ್ರೀಮತಿ ಜೈನಾಬಿ ಸಾಬ್, ಅಧ್ಯಕ್ಷರು, ಪಟ್ಟಣ ಪಂಚಾಯತ, ಹೊನ್ನಾವರ, ಶ್ರೀಮತಿ ಶ್ರೀಕಲಾ ಶಾಸ್ತ್ರಿ, ಸದಸ್ಯರು ಜಿಲ್ಲಾ ಪಂಚಾಯತ, ಶ್ರೀಮತಿ ಸವಿತಾ ಕೃಷ್ಣ ಗೌಡ, ಸದಸ್ಯರು ಜಿಲ್ಲಾ ಪಂಚಾಯತ, ಶ್ರೀ ವಿ.ಆರ್. ಗೌಡ, ತಾಲೂಕಾ ದಂಡಾಧಿಕಾರಿಗಳು, ಹೊನ್ನಾವರ, ಶ್ರೀ ರಾಮಕೃಷ್ಣ ನಾಯಕ, ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಮತ್ತು ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಜಿ.ಎಸ್. ಭಟ್ಟ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶ್ರೀ ಎಸ್.ಎಸ್. ಭಟ್ಟ, ಶ್ರೀಮತಿ ಲಲಿತಾ ಹೆಗಡೆ, ಉಪಾಧ್ಯಕ್ಷರುಗಳು, ಶ್ರೀಮತಿ ಶೋಭಾ ಅನಿಲ ಕುಲಕರ್ಣಿ, ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಎಂ ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಇವರುಗಳು ಭಾಗವಹಿಸಿದ್ದರು.

ಡಾ॥ ಜಿ.ಜಿ. ಸಭಾಹಿತ್, ಜಿಲ್ಲಾ ಮುಖ್ಯ ಆಯುಕ್ತರು ಎಲ್ಲರನ್ನು ಸ್ವಾಗತಿಸಿದರು, ಶ್ರೀ ಕೃಷ್ಣಮೂರ್ತಿ ಭಟ್, ಅಧ್ಯಕ್ಷರು, ಸ್ಥಳೀಯ ಸಂಸ್ಥೆ, ಹೊನ್ನಾವರ, ಗಣ್ಯರನ್ನು ಗೌರವಿಸಿದರು. ಶ್ರೀ ಬಿ.ಡಿ. ಫರ್ನಾಂಡಿಸ್, ಜಿಲ್ಲಾ ಕಾರ್ಯದರ್ಶಿ, ಜಿಲ್ಲಾ ವರದಿಯನ್ನು ಓದಿದರು. ಶ್ರೀ ಜನಾರ್ಧನ ಎಸ್.ನಾಯ್ಕ, ಕಾರ್ಯದರ್ಶಿ ಸ್ಥಳೀಯ ಸಂಸ್ಥೆ, ಹೊನ್ನಾವರ, ಇವರು ವಂದನಾರ್ಪಣೆ ಮಾಡಿದರು, ಶ್ರೀ ರಾಜು ಹೆಬ್ಬಾರ, ಜಿಲ್ಲಾ ಕೋಶಾಧಿಕಾರಿ, ಶ್ರೀ ನಾಗೇಶ ಶಿವಪುರ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು( ಸ್ಕೌಟ್ಸ್), ಕಾರ್ಯಕ್ರಮವನ್ನು ಯಶಸ್ವಿಯಾಗಿ ಸಂಘಟಿಸಿದ್ದರು.



ಈ ಕಾರ್ಯಕ್ರಮದಲ್ಲಿ ಭಟ್ಕಳ್, ಹೊನ್ನಾವರ, ಕುಮಟ, ಅಂಕೋಲ ಹಾಗೂ ಕಾರವಾರ ತಾಲ್ಲೂಕುಗಳಿಂದ 1500 ಕಬ್ಸ್, ಬುಲ್‌ಬುಲ್ ಸ್ಕೌಟ್ಸ್-ಗೈಡ್ಸ್, ರೋವರ್, ರೇಂಜರ್ಸ್, ಹಾಗೂ ದಳ ನಾಯಕರು ಭಾಗವಹಿಸಿದ್ದರು. ಹೊನ್ನಾವರ ಪಟ್ಟಣ ಬೀದಿಗಳಲ್ಲಿ ನಡೆದ ಜಾಥಾದಲ್ಲಿ ಶ್ರೀ ಮಂಕಾಳು ಎಸ್. ವೈದ್ಯ, ಮಾನ್ಯ ಶಾಸಕರು, ಭಟ್ಕಳ ವಿಧಾನಸಭಾ ಕ್ಷೇತ್ರ ಹಾಗೂ ಶ್ರೀ ಪಿ.ಜಿ.ಆರ್.ಸಿಂಧ್ಯ ಭಾಗವಹಿಸಿದರು..

